CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೩೦, ೨೦೦೪ (ಆಶ್ವಯುಜ ೮, ಶಕ ವರ್ಷ ೧೯೨೬) | ಸಂಚಿಕೆ ೪೦ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ನ್ಯಾಯಾಲಯದಲ್ಲಿ**
**ನಂ. ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/239/1990-91, ದಿನಾಂಕ: 25ನೇ ಆಗಸ್ಟ್ 2004**

**ಉಪಸ್ಥಿತರು:** ಶ್ರೀ ಕೆ.ಸಿ. ಹರಿದಾಸ್, ಕೆ.ಇ.ಎಸ್.
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದಿ:** ಎಮ್. ಕೃಷ್ಣಮೂರ್ತಿ, ಪೊಲೀಸ್ ಉಪ ನಿರೀಕ್ಷಕರು, ಹೊನ್ನಾವರ ಪೊಲೀಸ್ ಠಾಣೆ, ಎಲ್‌ಎಂಡ್‌ಓ.
(ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ.

**ವಿರುದ್ಧ**

**ಅರ್ಜಿದಾರರು:** ಮಹಾದೇವ ನಾರಾಯಣ ಹರಿಕಂತ್ರ, ಸಾ: ಮಾವಿಕುರ್ವಾ, ಹೊನ್ನಾವರ
(ಶ್ರೀ ಕೆ.ಆರ್. ನಾಯ್ಕ, ವಕೀಲರು ಕಾರವಾರ ಮತ್ತು ಶ್ರೀ ಎನ್.ಎಸ್. ಭಟ್, ವಕೀಲರು ಕಾರವಾರ ಇವರುಗಳು ಪ್ರತಿನಿಧಿಸಿರುತ್ತಾರೆ.)

**ತೀರ್ಪು**

1. ಈ ಆರೋಪವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 34 ಮತ್ತು 38 ರಂತೆ ಹೊರಿಸಿದ್ದು, ಜಪ್ತಿಯಾದಂತಹ ಸ್ವತ್ತುಗಳನ್ನು ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.
2. ಈ ಪ್ರಕರಣದ ಫಿರ್ಯಾದುದಾರರು ದಿನಾಂಕ: 20.4.1991 ರಂದು ರಾತ್ರಿ 2.00 ಗಂಟೆಯ ಸಮಯಕ್ಕೆ ತನಗೆ ಬಂದಂತಹ ಬಾತ್ಮಿಯ ಮೇರೆಗೆ ತನ್ನ ಸಿಬ್ಬಂದಿಗಳು ಹಾಗೂ ಪಂಚರೊಂದಿಗೆ 2.30 ಗಂಟೆಗೆ ಕಾಸರಕೋಡ ಹಿರೇಮಠದಲ್ಲಿ ಬಂದಾಗ, ಬ್ರಿಡ್ಜ್‌ನಿಂದ ಸ್ವಲ್ಪ ದೂರದಲ್ಲಿ ಶರಾವತಿ ನದಿಯ ಕಿನಾರೆಗೆ ಒಂದು ಲಾಂಚ್ ನಿಂತಿದ್ದು, ಅದರ ಮೇಲೆ ಆರು ಜನರಿದ್ದರೆಂದೂ, ಅವರೆಲ್ಲರೂ ಸರಾಯಿ ಮೂಟೆಗಳನ್ನು ಇಳಿಸುತ್ತಾ ಇದ್ದರೆಂದೂ, ಕೆಲವರು ಮೂಟೆಗಳನ್ನು ಒಯ್ಯುತ್ತಿದ್ದರೆಂದೂ, ತಾವು ಬ್ಯಾಟರಿಯ ಬೆಳಕು ಬಿಟ್ಟು ನೋಡುತ್ತಾ ಮುಂದೆ ಹೋಗುವಷ್ಟರಲ್ಲಿ ಮೂಟೆ ಹೊರುತ್ತಿದ್ದವರು ಓಡಿ ಹೋದರೆಂದೂ, ಅವರ ಗುರ್ತು-ಪರಿಚಯ ಹತ್ತಲಿಲ್ಲವೆಂದೂ, ಲಾಂಚಿನಲ್ಲಿ ಉಳಿದ ಮೂಟೆಗಳನ್ನು ಇಳಿಸುತ್ತಿದ್ದವರು ಸಹ ತಮ್ಮನ್ನು ನೋಡಿ ಲಾಂಚಿನಿಂದ ಇಳಿದು ಓಡ ಹತ್ತಿದರೆಂದೂ, ಅವರ ಪೈಕಿ ಇಬ್ಬರನ್ನು ಲಾಂಚಿನಿಂದ ಇಳಿಯುವಷ್ಟರಲ್ಲಿ ಹಿಡಿದೆವೆಂದೂ, ಉಳಿದ ನಾಲ್ಕು ಜನರನ್ನು ಹಿಡಿಯಲು ಬೆನ್ನಟ್ಟಿದರೂ ಅವರು ಸಿಗಲಿಲ್ಲವೆಂದೂ, ಆದರೆ ಬ್ಯಾಟರಿ ಬೆಳಕಿನಲ್ಲಿ ಅವರನ್ನು ಗುರ್ತಿಸಿದೆವೆಂದೂ, ನಂತರ ಹಿಡಿದ ಎರಡು ಜನರ ಹೆಸರು ಮತ್ತು ವಿಳಾಸ ಕೇಳಿದಾಗ ಅವರು ಹೇಳಿದರೆಂದೂ, ನಂತರ ಲಾಂಚನ್ನು ಪರಿಶೀಲಿಸಲಾಗಿ, ಅದರ ಡೆಕ್ಕ್‌ನ ಕೆಳಗಡೆ ಸರಾಯಿ ಬಾಟ್ಲಿಗಳನ್ನು ತುಂಬಿದ 10 ಮೂಟೆಗಳು ಮತ್ತು ಮುಂದಿನ ಬಾಣೆಯ ಮೇಲೆ 2 ಮೂಟೆಗಳು ಹೀಗೆ ಒಟ್ಟೂ 12 ಸರಾಯಿ ಬಾಟ್ಲಿಗಳನ್ನು ತುಂಬಿದ ಗೋಣಿ ಪಾಟ್ ಚೀಲದ ಮೂಟೆಗಳು ಇತ್ತೆಂದೂ, ಅವುಗಳನ್ನು ತೆರೆದು ಪರಿಶೀಲಿಸಲಾಗಿ ಪ್ರತಿಯೊಂದು ಮೂಟೆಯಲ್ಲಿ 375 ಮಿ.ಲೀ.ನ 48 ಬಾಟ್ಲಿಗಳಂತೆ ಒಟ್ಟೂ 576 ಬಾಟ್ಲಿಗಳಿದ್ದವೆಂದೂ, ನಂತರ ತಾವು ಹಿಡಿದ ಆರೋಪಿತರಿಗೆ ಸರಾಯಿ ಬಾಟ್ಲಿಗಳು ಮತ್ತು ಲಾಂಚ್

ಯಾರದೆಂದೂ ವಿಚಾರಿಸಲಾಗಿ, ಬಾಟ್ಲಿಗಳು ಓಡಿ ಹೋದ ಆರೋಪಿತರಾದ ಫೀಲಿಪ್, ಸಂತಾನ ಮತ್ತು ಮೈಕಲ್ ಇವರದೆಂದು ಮತ್ತು ಲಾಂಚು ಓಡಿ ಹೋದ ಮಹಾದೇವ ನಾರಾಯಣ ಹರಿಕಂತ್ರ ಇವರ ಮಾಲೀಕತ್ವದ್ದು ಎಂದು ಹೇಳಿದರೆಂದೂ, ಇವುಗಳನ್ನು ಸಾಗಿಸುವುದಕ್ಕಾಗಿ ಯಾವುದೇ ರೀತಿಯ ಪಾಸ ಅಥವಾ ಪರ್ಮಿಟ್ ಇದೆಯೇ ಎಂದು ಕೇಳಲಾಗಿ ಇಲ್ಲ ಎಂದು ಹೇಳಿದರೆಂದೂ ಸದರಿ ಮದ್ಯವನ್ನು ಯಾವುದೇ ರೀತಿಯ ಪಾಸ ಅಥವಾ ಪರ್ಮಿಟ್ ಇಲ್ಲದೇ ಸಾಗಿಸುತ್ತಿರುವುದು ಕಂಡು ಬಂದಿದ್ದರಿಂದ, ಇವುಗಳನ್ನು ಜಪ್ತು ಮಾಡಿ, ಪ್ರತಿಯೊಂದು ಪೊಟ್ಲೆಯಿಂದ ಒಂದೊಂದು ಬಾಟ್ಲಿಯನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು, ಜಪ್ತಿಯಾದ ಮುದ್ದೆ ಮಾಲುಗಳು ಹಾಗೂ ರಾಸಾಯನಿಕ ಪರೀಕ್ಷೆಗೆ ತೆಗೆದ ಬಾಟ್ಲಿಗಳಿಗೆ ಫಿರ್ಯಾದುದಾರರ ಹಾಗೂ ಪಂಚರ ಸಹಿಯುಳ್ಳ ಲೇಬಲ್ ಹಚ್ಚಿ, ಹೊನ್ನಾವರ ಪೊಲೀಸ್ ಕಛೇರಿಯ ಮೊಹರಿನಿಂದ ಸೀಲ್ ಮಾಡಿ, ತಮ್ಮ ತಾಬಾಕ್ಕೆ ತೆಗೆದುಕೊಂಡೆವೆಂದೂ, ಸದರಿ ಜಪ್ತು ಮಾಲನ್ನು ಹೊತ್ತು ತಂದಂತಹ ಲಾಂಚನ್ನು ಪರಿಶೀಲಿಸಿ ನೋಡಲಾಗಿ, ಅದು ದುರ್ಗಾವೀಣಾ ಎಂಬ ಹೆಸರಿನ 4 ಸಿಲಿಂಡರಿನ ಲಾಂಚ್ ಆಗಿತ್ತೆಂದೂ, ಅದರ ಇಂಜಿನ್ ನಂ. 774 ಎ 149 ಮಾರ್ಕ್ 4 ವಾಯ್ ಎ.ಎಮ್ ಎಂದು ಇರುತ್ತದೆಂದೂ, ಈ ಲಾಂಚ್ ಚಾಲು ಸ್ಥಿತಿಯಲ್ಲಿದ್ದು, ಅದರ ಮೇಲೆ ಮೀನುಗಾರಿಕೆಗೆ ಉಪಯೋಗದ ಯಾವುದೇ ಸಲಕರಣೆಗಳು ಇರುವುದಿಲ್ಲವೆಂದೂ, ಸದರಿ ಲಾಂಚನ್ನು ಸಹ ಪಂಚರ ಸಮಕ್ಷಮ ಜಪ್ತು ಮಾಡಿ, ತಾಬಾಕ್ಕೆ ತೆಗೆದುಕೊಂಡು ಪಂಚರ ಸಮಕ್ಷಮ ಪಂಚನಾಮೆ ತಯಾರಿಸಿ, ಸದ್ರಿ ಮದ್ಯಸಾರದ ಸ್ವತ್ತುಗಳು ಹಾಗೂ ಬೋಟನ್ನು ಮುಂದಿನ ಕ್ರಮದ ಕುರಿತು ಜಪ್ತು ಮಾಡಿ ಹೊನ್ನಾವರ ಪೊಲೀಸ್ ಠಾಣೆಗೆ ಫಿರ್ಯಾದು ನೀಡಿದ ಪ್ರಕಾರ, ಪ್ರಥಮ ಮಾಹಿತಿ ವರದಿ ನಂ. 97/1991 ದಿನಾಂಕ: 20.4.1991 ರಂತೆ ಪ್ರಕರಣವನ್ನು ದಾಖಲಿಸಿದ್ದು, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 34 ಮತ್ತು 38ರ ಪ್ರಕಾರ ಶಿಕ್ಷಾರ್ಹವಾಗಿರುವುದಾಗಿ ತಿಳಿಸಿ, ಜಪ್ತಾದ ಮುದ್ದೆ ಮಾಲನ್ನು (ಮಾದರಿ ಸೀಸೆಗಳನ್ನು ಹೊರತುಪಡಿಸಿ) ಹಾಗೂ ಗುನ್ನೆಗೆ ಸಂಬಂಧಿಸಿದ ದಾಖಲಾತಿಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿ, ಕರ್ನಾಟಕ ಅಬಕಾರಿ ಕಾಯ್ದೆಯ ಕಲಂ 43ಎ(2)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿ ಸಲ್ಲಿಸಿರುತ್ತಾರೆ.

3. ಆನಂತರ ದಿನಾಂಕ: 7.5.1991 ರಂದು ಮಹಾದೇವ ನಾರಾಯಣ ಹರಿಕಂತ್ರ ಸಾ: ಮಾವಿನಕುರ್ವಾ, ಹೊನ್ನಾವರ ಇವರು ತನ್ನ ವಕೀಲರಾದ ಶ್ರೀ ವಿ.ಎಸ್. ಭಾಗವತ ಇವರ ಮೂಲಕ ಅರ್ಜಿ ಸಲ್ಲಿಸುತ್ತಾ, ತನ್ನ ಲಾಂಚಿನ ಮೇಲೆ ಹೊರಿಸಿರುವ ಆರೋಪಗಳನ್ನು ಅಲ್ಲಗಳೆಯುತ್ತಾ, ಈ ಪ್ರಕರಣದಲ್ಲಿ ಜಪ್ತಿಯಾದ ದೋಣಿಯು ತನ್ನ ಮಾಲೀಕತ್ವದ್ದಾಗಿದ್ದು, ಅದು ತನ್ನ ದಿನನಿತ್ಯದ ಉಪಯೋಗಕ್ಕಾಗಿ ಅವಶ್ಯಕವಾಗಿದ್ದು ಅದನ್ನು ತನಗೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಬೇಕೆಂದು ವಿನಂತಿಸಿರುತ್ತಾರೆ.

4. ಈ ಪ್ರಕರಣದಲ್ಲಿ ಜಪ್ತಿಯಾಗಿರುವಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಕಾರಣ ಕೇಳಿ ನೋಟೀಸನ್ನು ದಿನಾಂಕ: 6.5.1991 ರಂದು ಪ್ರಕರಣದಲ್ಲಿನ ಎಲ್ಲಾ ಆರೋಪಿಗಳಿಗೆ ಕಳುಹಿಸಲಾಗಿ, ಅದನ್ನು ಲಾಂಚಿನ ಮಾಲೀಕರು ದಿನಾಂಕ: 16.5.1991 ರಂದು ಸ್ವೀಕರಿಸಿ, ದಿನಾಂಕ: 13.1.1992 ರಂದು ತನ್ನ ಸಮಜಾಯಿಷಿಯನ್ನು ಸಲ್ಲಿಸುತ್ತಾ, ಈ ಪ್ರಕರಣದಲ್ಲಿ ತನ್ನ ಮೇಲೆ ಹೊರಿಸಿರುವ ಆರೋಪಗಳನ್ನು ನಿರಾಕರಿಸಿರುತ್ತಾರೆ.

5. ಈ ಪ್ರಾಧಿಕಾರದ ಆದೇಶ ಸಂಖ್ಯೆ: ಇಸಿ/239/1991-92, ದಿನಾಂಕ: 12.3.1992 ರಂದು ಈ ಪ್ರಕರಣದಲ್ಲಿ ಜಪ್ತಿಯಾಗಿರುವ ಲಾಂಚಿಗೆ ರೂ. 35,000/- ಗಳ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಅರ್ಜಿದಾರರಿಗೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲಾಗಿರುತ್ತದೆ.

6. ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊನ್ನಾವರದಲ್ಲಿ ಸಿ.ಸಿ. ನಂ. 910/91 ರಲ್ಲಿ ಸಲ್ಲಿಸಿರುವುದು ಕಂಡು ಬರುತ್ತದೆ.

7. ಪ್ರಾಧಿಕಾರದ ಆದೇಶ ಸಂಖ್ಯೆ: ಇಸಿ/239/1990-91, ದಿನಾಂಕ: 2.7.1993 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದ ಲಾಂಚನ್ನು ಹಾಗೂ ಗೋವಾ ಸರಾಯಿ ಬಾಟ್ಲಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ. ಆನಂತರ ಅರ್ಜಿದಾರರು ಸದರಿ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ ಪ್ರಕಾರ ಮಾನ್ಯ ಸೆಷನ್ಸ್ ನ್ಯಾಯಾಲಯ, ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 1/1994 ದಿನಾಂಕ: 6.2.1995 ರಂತೆ ಅರ್ಜಿದಾರರ ಅರ್ಜಿಯನ್ನು ಪುರಸ್ಕರಿಸಿ, ಈ ಪ್ರಾಧಿಕಾರದ ಆದೇಶವನ್ನು ತಳ್ಳಿಹಾಕುತ್ತಾ, ಕರ್ನಾಟಕ ಅಬಕಾರಿ ಕಾಯ್ದೆ ಹಾಗೂ ಇನ್ನಿತರ ನೈಸರ್ಗಿಕ ನ್ಯಾಯದ ನಿಯಮಗಳ ಅಡಿಯಲ್ಲಿ ವಿವರಿಸಲಾದ ನಿಯಮಾವಳಿಗಳ ಪ್ರಕಾರ ಈ ಪ್ರಕರಣದ ವಿಚಾರಣೆಯನ್ನು ಹೊಸದಾಗಿ ಪ್ರಾರಂಭಿಸಿ, ಉಭಯತರ ಪಕ್ಷದವರಿಗೆ ಸಮಾನವಾದ ಅವಕಾಶವನ್ನು ನೀಡಿ, ಆದೇಶವನ್ನು ಹೊರಡಿಸಲು ಸೂಚಿಸಿರುತ್ತಾರೆ.

8. ಮಾನ್ಯ ಸೆಷನ್ಸ್ ನ್ಯಾಯಾಲಯದ ಆದೇಶದ ಹಿನ್ನಲೆಯಲ್ಲಿ ಲಭ್ಯವಿರುವ ದಾಖಲೆಗಳನ್ನಾಧರಿಸಿ ಲಾಂಚಿನ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ-1 (ಸಿ) ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿ.ಆರ್.ಪಿ.ಸಿ. ಕಲಂ 207 ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34 ಮತ್ತು 38 ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿ.ಡಬ್ಲ್ಯೂ-1 ರಿಂದ 2 ರವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ-1 ರಿಂದ ಪಿ-4 ರವರೆಗೆ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರನಾದ ಕೇಶವ ಕೃಷ್ಣಾ ನಾಯ್ಕ ಈತನು ದಿನಾಂಕ: 17.12.2003 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾನೆ. ಇನ್ನೊಬ್ಬ ಪಂಚಸಾಕ್ಷಿದಾರನಾದ ನಾರಾಯಣ ಚನ್ನಾ ನಾಯ್ಕ ಈತನಿಗೆ ಸಾಕಷ್ಟು ಬಾರಿ ನೋಟೀಸುಗಳನ್ನು ಜಾರಿಗೆ ಕಳುಹಿಸಲಾಗಿ ಆತನು ಹಾಲಿ ಎಲ್ಲಿರುತ್ತಾನೆಂದು ತಿಳಿದುಬಾರದ ಕಾರಣ ಕಳೆದ ಎರಡು ವರ್ಷಗಳಿಂದ ಸಾಕಷ್ಟು ನೋಟೀಸುಗಳು ಜಾರಿಯಾಗದೇ ಮರಳಿ ಬಂದಿರುತ್ತವೆ. ಆದುದರಿಂದ ಸದರಿಯವರ ವಿಚಾರಣೆಯನ್ನು ಕೈಬಿಡಲಾಗಿದೆ.

9. ಆದಾಗ್ಯೂ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡು ಬಂದಿದ್ದರಿಂದ ದಂಡ ಪ್ರಕ್ರಿಯೆ ಸಂಹಿತೆ ಕಲಂ-313 ರಡಿಯಲ್ಲಿ ಅರ್ಜಿದಾರರ ಹೇಳಿಕೆಯನ್ನು ನೀಡುವುದಾದಲ್ಲಿ ನೀಡುವಂತೆ ಸೂಚಿಸಲಾಗಿ, ಅರ್ಜಿದಾರರ ಪಕ್ಷದವರು ತಾವು ಈ ಹಿಂದೆಯೇ ದಿನಾಂಕ: 29.3.1993 ರಂದು ನೀಡಿರುವ ಹೇಳಿಕೆಯನ್ನೇ ಡಿ.ಡಬ್ಲ್ಯೂ-1 ಎಂದು ಪರಿಗಣಿಸಲು ವಿನಂತಿಸಿರುತ್ತಾರೆ ಹಾಗೂ ಆಗ ಗುರುತಿಸಲಾಗಿದ್ದ ನಿಶಾನೆಯನ್ನು ಡಿ-1 ಎಂದು ಪರಿಗಣಿಸಲು ವಿನಂತಿಸಿರುತ್ತಾರೆ.

10. ಈ ಪ್ರಕರಣದಲ್ಲಿ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲಾದ ದೋಣಿ ಹಾಗೂ ಮಶೀನನ್ನು ಹಾಜರುಪಡಿಸಲು ಮಹಾದೇವ ನಾರಾಯಣ ಹರಿಕಂತ್ರ ಇವರಿಗೆ ನೋಟೀಸನ್ನು ಕಳುಹಿಸಲಾಗಿ ಒಮ್ಮೆಯೂ ಸಹ ಹಾಜರುಪಡಿಸಿರುವುದಿಲ್ಲ. ಇದರಿಂದಾಗಿ ಪ್ರಾಧಿಕಾರದ ಮಧ್ಯಂತರ ಆದೇಶದಲ್ಲಿನ ಶರತ್ತುಗಳನ್ನು ಅರ್ಜಿದಾರರು ಉಲ್ಲಂಘಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

11. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ಹಾಗೂ ಅರ್ಜಿದಾರರ ಪರವಾಗಿ ಶ್ರೀ ವಿ.ಎಸ್. ಭಾಗವತ, ವಕೀಲರು ಕಾರವಾರ ರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಕಡತದಲ್ಲಿ ಲಭ್ಯವಿರುವ ದಾಖಲೆಗಳನ್ನು ಅವಲೋಕಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬರುತ್ತದೆ.

12. **ವಿವಾದಾಂಶಗಳು:-**

1. ದಿನಾಂಕ: 20.4.1991 ರಂದು ರಾತ್ರಿ 2.30 ಗಂಟೆಯ ಸಮಯಕ್ಕೆ ಹೊನ್ನಾವರದ ಕಾಸರಕೋಡ ಹಿರೇಮಠ ಬ್ರಿಡ್ಜಿನ ಸ್ವಲ್ಪ ದೂರದಲ್ಲಿ ಈ ಪ್ರಕರಣದ ಆರು ಜನ ಆರೋಪಿಗಳು ದುರ್ಗಾವೀಣಾ ಎಂಬ ಹೆಸರಿನ ನಾಲ್ಕು ಸಿಲಿಂಡರಿನ ಲಾಂಚಿನಲ್ಲಿ 12 ಪೊಟ್ಲೆಗಳಲ್ಲಿ ಪ್ರತಿಯೊಂದರಲ್ಲಿ 375 ಮಿ.ಲೀ.ನ 48 ರಂತೆ ಒಟ್ಟೂ 576 ಗೋವಾ ಫೆನ್ನಿ ಬಾಟ್ಲಿಗಳನ್ನು ಅಕ್ರಮವಾಗಿ ಸಾಗಿಸುತ್ತಿದ್ದರೇ?
2. ಘಟನೆ ಸಂಭವಿಸಿದಾಗ ಲಾಂಚ್ ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ಲಾಂಚಿನ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ಈ ಲಾಂಚಿನಲ್ಲಿ ಅಕ್ರಮವಾಗಿ ಗೋವಾ ಫೆನ್ನಿಯು ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?
3. ಲಾಂಚನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

ಅಂಶ - 1 - ಸಕಾರಾತ್ಮಕವಾಗಿ
ಅಂಶ - 2 - ನಕಾರಾತ್ಮಕವಾಗಿ
ಅಂಶ - 3 - ಸಕಾರಾತ್ಮಕವಾಗಿ

**ಕಾರಣಗಳು**

13. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಸಾಕ್ಷಿದಾರರಾದ ಈ ಪ್ರಕರಣದ ಫಿರ್ಯಾದುದಾರರಾದ ಎಂ. ಕೃಷ್ಣಮೂರ್ತಿ, ಹಾಲಿ ಡಿ.ಎಸ್.ಪಿ. ರವರು ದಿನಾಂಕ: 5.3.2003 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯೂ-1 ರಂತೆ ತನ್ನ ಸಾಕ್ಷ್ಯವನ್ನು ನುಡಿಯುತ್ತಾ, ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, 1990-91 ರಲ್ಲಿ ತಾನು ಹೊನ್ನಾವರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 20.4.1991 ರಲ್ಲಿ ಬೆಳಗಿನ ಜಾವ ತಾನು ಠಾಣೆಯಲ್ಲಿದ್ದಾಗ ತನಗೆ ತಿಳಿದುಬಂದ ಖಚಿತ ಮಾಹಿತಿಯ ಮೇರೆಗೆ ಕ್ರೈಂ ಪಿ.ಎಸ್.ಐ. ಲಕ್ಷ್ಮಣ, ಜಿ.ಪಿ. ನಾಯ್ಕ ಮತ್ತು ಸಿಬ್ಬಂದಿಗಳು ಹಾಗೂ ಪಂಚರನ್ನು ಕರೆದುಕೊಂಡು ಶರಾವತಿ ನದಿಯ ದಕ್ಷಿಣ ಬದಿಯಲ್ಲಿ ಸೇತುವೆಯ ಪೂರ್ವ ಬದಿಯಲ್ಲಿ ಗೋವಾದಿಂದ ಅಕ್ರಮವಾಗಿ ರಹದಾರಿ ಇಲ್ಲದೆ ಲಾಂಚಿನ ಮೇಲೆ ಗೋವಾ ಫೆನ್ನಿಯನ್ನು ಅಕ್ರಮ ಸಾಗಾಣಿಕೆ ಮಾಡುತ್ತಿದ್ದಾರೆ ಅಂತ ತಿಳಿದು ಬಂದ ಆಧಾರದ ಮೇರೆಗೆ ಮೇಲ್ಕಾಣಿಸಿದ ಸಿಬ್ಬಂದಿಗಳು ಮತ್ತು ಪಂಚರೊಂದಿಗೆ ಏಕಾಏಕಿ ದಾಳಿ ನಡೆಸಲಾಗಿ ಲಾಂಚಿನ ಮೇಲ್ಭಾಗದಲ್ಲಿ ಇದ್ದ ಆರು ಜನರು ತಮ್ಮವರನ್ನು ನೋಡಿ ಓಡಲು ಆರಂಭಿಸಿದಾಗ, ತಾವು ಟಾರ್ಚಿನ ಬೆಳಕಿನಿಂದ ಅವರನ್ನು ಗುರ್ತಿಸಿ ಹಿಡಿಯಲಿಕ್ಕೆ ಪ್ರಯತ್ನಿಸಿದೆವೆಂದೂ, ಆ ಆರು ಮಂದಿಗಳ ಪೈಕಿ ನಾಲ್ಕು ಮಂದಿ ತಪ್ಪಿಸಿಕೊಂಡು ಓಡಿ ಹೋದರೆಂದೂ, ಇಬ್ಬರನ್ನು ಹಿಡಿಯಲು ತಾವು ಯಶಸ್ವಿಯಾದೆವೆಂದೂ, ಅವರ ಹೆಸರುಗಳನ್ನು ವಿಚಾರಣೆ ಮಾಡಲಾಗಿ ಒಬ್ಬ ನಾರಾಯಣ ಹರಿಕಂತ್ರ, ಇನ್ನೊಬ್ಬ ಫಿಲೀಪ್ ಅಗೋಸ್ಟಿನ್ ರೋಸ್ಟ್, ಮೂರನೆಯವನು ಸಂತಾನ ಜೂಜ್ ಫರ್ನಾಂಡಿಸ್ ಮತ್ತು ನಾಲ್ಕನೆಯವನು ಮೈಕಲ್ ಡಿಸೋಜಾ ಇವರೆಲ್ಲರೂ ಕೊಡಾಣಿಯವರಾಗಿರುತ್ತಾರೆಂದೂ, ಆ ಲಾಂಚನ್ನು ಪರಿಶೀಲಿಸಲಾಗಿ ಗೋಣಿ ತಟ್ಟಿನ ಚೀಲಗಳಲ್ಲಿ ಅವುಗಳಿದ್ದು, ಅವು ಒಟ್ಟೂ ಹನ್ನೆರಡು ಮೂಟೆಗಳಾಗಿದ್ದವೆಂದೂ, ಪ್ರತಿಯೊಂದರಲ್ಲಿ 375 ಮಿ.ಲೀಟರಿನ 48 ರಂತೆ ಇದ್ದವೆಂದೂ, ಅವು ಗೋವಾ ಫೆನ್ನಿಯ ಬಾಟ್ಲಿಗಳಾಗಿದ್ದವೆಂದೂ ಹಿಡಿದಂತಹ ವ್ಯಕ್ತಿಗಳನ್ನು ವಿಚಾರಿಸಲಾಗಿ ಯಾವುದೇ ಪಾಸ್ ಯಾ ಪರ್ಮಿಟ್ ಇಲ್ಲವೆಂದು ತಿಳಿಸಿದರೆಂದೂ, ಲಾಂಚಿನಲ್ಲಿ ನೋಡಲಾಗಿ ಅದರಲ್ಲಿ ಯಾವುದೇ ದಾಖಲಾತಿಗಳು ಸಿಗಲಿಲ್ಲವೆಂದೂ, ಅವುಗಳನ್ನು ಪಂಚರ ಸಮಕ್ಷಮ ಬೋಟ್ ಸಮೇತ ಜಪ್ತಿ ಮಾಡಿಕೊಂಡೆವೆಂದೂ, ಪ್ರತಿಯೊಂದು ಮೂಟೆಯಿಂದ ಒಂದೊಂದು ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಕಳುಹಿಸುವ ಸಲುವಾಗಿ ಮಾದರಿಗೆ ತೆಗೆದುಕೊಂಡು, ಅವುಗಳ ಮೇಲೆ ಪಂಚರ ಸಹಿಯಿರುವ ಲೇಬಲ್‌ಗಳನ್ನು ಅಂಟಿಸಿ, ತನ್ನ ಸಹಿ ಮಾಡಿದೆನೆಂದೂ, ನಂತರ ಬೋಟ್ ಹಾಗೂ ಸರಾಯಿ ಸೀಸೆಗಳನ್ನು ಪಂಚರ ಸಮಕ್ಷಮ ಪಂಚನಾಮೆ ಮಾಡಿ, ಜಪ್ತಿ ಮಾಡಿ ತಮ್ಮ ತಾಬಾಕ್ಕೆ ತೆಗೆದುಕೊಳ್ಳಲಾಯಿತೆಂದೂ, ಠಾಣೆಗೆ ಬಂದು ತನ್ನ ಫಿರ್ಯಾದನ್ನು ದಾಖಲಿಸಿ, ಹೊನ್ನಾವರ ಪೊಲೀಸ್ ಠಾಣೆಯ ಕ್ರೈಂ ನಂ. 97/91 ರಂತೆ ಪ್ರ.ಮಾ. ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಅದರ ಪ್ರತಿಯನ್ನು ಹಾಗೂ ಸ್ವತ್ತಿನ ಪಟ್ಟಿಯೊಂದಿಗೆ ಪ್ರಾಧಿಕಾರಕ್ಕೆ ಜಪ್ತಾದ ಮುದ್ದೆಮಾಲನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಕ್ಕಾಗಿ ಪ್ರಾಧಿಕಾರದ ಮುಂದೆ

ಹಾಜರುಪಡಿಸಿದೆನೆಂದೂ, ಜಪ್ತಾದ ಸ್ಯಾಂಪಲ್ ಸೀಸೆಗಳನ್ನು ರಾಸಾಯನಿಕ ತಜ್ಞರ ಪರೀಕ್ಷೆ ಕುರಿತು ವರದಿ ಮಾಡಿದೆನೆಂದೂ, ಜಪ್ತಾದ ಲಾಂಚನಲ್ಲಿ ಪಾಸ, ಪರ್ಮಿಟ್ ಇಲ್ಲದೆ ಸರಾಯಿ ಸಾಗಿಸುತ್ತಿದ್ದುದರಿಂದ ಜಪ್ತಿಯಾದಂತಹ ಮುದ್ದೆಮಾಲು ಮತ್ತು ಬೋಟನ್ನು ಕಲಂ 43 ಎ(2) ರಂತೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗಿ ವಿನಂತಿಸಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿನಲ್ಲಿ ತನಗೆ ಬಾತ್ಮಿ ಸಿಕ್ಕ ಬಗ್ಗೆ ಸ್ಟೇಷನ್ ಡೈರಿಯಲ್ಲಿ ನಮೂದು ಮಾಡಿದ್ದೇನೆಂದೂ, ಪಂಚರನ್ನು ತಮ್ಮ ಸಿಬ್ಬಂದಿಯನ್ನು ಕಳುಹಿಸಿ ಕರೆಯಿಸಿಕೊಂಡೆನೆಂದೂ, ಲಾಂಚ್ ಸರ್ಚ್ ಮಾಡುವ ಬಗ್ಗೆ ಮ್ಯಾಜಿಸ್ಟ್ರೇಟರಿಂದ ವಾರಂಟ್ ಪಡೆದಿರಲಿಲ್ಲವೆಂದೂ, ಮಹಾದೇವ ನಾರಾಯಣ ಹರಿಕಂತ್ರ ಈತನನ್ನು ಸ್ಥಳದಲ್ಲಿ ದಸ್ತಗಿರಿ ಮಾಡಲಿಲ್ಲವೆಂದೂ, ಹೊನ್ನಾವರ ಪೊಲೀಸ್ ಸ್ಟೇಷನ್ನಿನವರು ಈ ಬಗ್ಗೆ ಹೊನ್ನಾವರ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಆರೋಪಣಾ ಪಟ್ಟಿಯನ್ನು ಹಾಕಿದ್ದಾರೆ. ಆ ಕೇಸಿನಲ್ಲಿ ಫಿರ್ಯಾದುದಾರರಾದ ತನ್ನ ಸಾಕ್ಷಿ ಆದ ಬಗ್ಗೆ ನೆನಪಿಲ್ಲವೆಂದೂ, ಆ ಕೇಸಿನಲ್ಲಿ ಸಿ.ಸಿ. 910/91 ರಲ್ಲಿ ವಿಚಾರಣೆ ನಡೆದು ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊನ್ನಾವರ ಇವರು 1.3.1993 ಕ್ಕೆ ತೀರ್ಪು ನೀಡಿ ಆರೋಪಿಗಳನ್ನು ಖುಲಾಸೆಪಡಿಸಿದ್ದಾರೆ ಅನ್ನುವುದು ತನಗೆ ಗೊತ್ತಿಲ್ಲ ಎಂದು ನುಡಿದಿರುತ್ತಾರೆ. ಮುಂದುವರೆದು ನಿಶಾನೆ ಪಿ-1 ನ್ನು ಗುನ್ಹಾ ಸ್ಥಳದಲ್ಲಿ ಬರೆಯಲಿಲ್ಲ ಮತ್ತು ಅದನ್ನು ಸ್ಟೇಷನ್ನಿನಲ್ಲಿ ಬರೆದು ಪಂಚರ ಸಹಿ ತೆಗೆದುಕೊಂಡಿದ್ದೇವೆನ್ನುವುದು ಸರಿಯಲ್ಲವೆಂದೂ, ಗುನ್ಹೆ ದಾಖಲಿಸಿದ ದಿನದಂದು ಆರೋಪಿಗಳು ಅಪರಾಧವೆಸಗಲಿಲ್ಲ ಅನ್ನುವುದು ಸರಿಯಲ್ಲವೆಂದೂ ಮತ್ತು ಅಬಕಾರಿ ಗುನ್ಹೆಗೆ ಸಂಬಂಧಿಸಿದ ಯಾವುದೇ ಮಾಲು ಈ ಲಾಂಚಿನಲ್ಲಿ ಸಿಗಲಿಲ್ಲ ಅನ್ನುವುದು ಸರಿಯಲ್ಲವೆಂದೂ, ಸರಾಯಿ ಗುತ್ತಿಗೆದಾರರ ಮಾತು ಕೇಳಿ ಸುಳ್ಳು ಪ್ರಕರಣ ದಾಖಲಿಸಿದ್ದೇವೆ ಎನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

14. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ**

ಬಾತ್ಮಿ ಸಿಕ್ಕ ಬಗ್ಗೆ ಸದರಿ ಸಾಕ್ಷಿದಾರರು ಸ್ಟೇಷನ್ ಡೈರಿಯಲ್ಲಿ ನಮೂದು ಮಾಡಿರದಿದ್ದಲ್ಲಿ ಅಂತಹ ಯಾವುದೇ ದಾಖಲೆಯನ್ನು ಎದುರುದಾರರ ಪಕ್ಷದವರು ತರಿಸಿಲ್ಲ. ಕ.ಅ. ಕಾಯ್ದೆ 1965ರ ಕಲಂ 52 ಪ್ರಕಾರ ತನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಲಾಂಚನ್ನು ಸರ್ಚ್ ಮಾಡಿದ್ದರಿಂದ ಸಂಬಂಧಪಟ್ಟ ಮ್ಯಾಜಿಸ್ಟ್ರೇಟರಿಂದ ಗುನ್ಹೆಯ ಅನ್ವೇಷಣಾಧಿಕಾರಿಗಳು ಸರ್ಚ್ ವಾರಂಟನ್ನು ಪಡೆಯದಿರುವುದು ವ್ಯಕ್ತವಾಗುತ್ತದೆ. ಮಹಾದೇವ ನಾರಾಯಣ ಹರಿಕಂತ್ರ ಈತನನ್ನು ಸ್ಥಳದಲ್ಲಿ ದಸ್ತಗೀರ್ ಮಾಡದಿರುವ ಬಗ್ಗೆ ಪಂಚನಾಮೆಯಲ್ಲಿ ನಮೂದಾಗಿದ್ದು, ಆ ನಂತರ ಸಲ್ಲಿಸಿರುವ ಆರೋಪಣಾ ಪಟ್ಟಿಯ ನಕಲನ್ನು ಪರಿಶೀಲಿಸಿದಾಗ ಸದರಿಯವನನ್ನು ನಂತರ ದಸ್ತಗೀರ್ ಮಾಡಿರುವುದು ಕಂಡುಬರುತ್ತದೆ. ಕ್ರಿಮಿನಲ್ ಕೇಸಿನಲ್ಲಿ ಆರೋಪಿಗಳು ಖುಲಾಸೆಯಾಗಿದ್ದಲ್ಲಿ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂದು ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ರವರ ತೀರ್ಪು ಡಿ.ಎಸ್. ವಿಜಯಕುಮಾರ ವಿರುದ್ಧ ಡೆಪ್ಯೂಟಿ ಕನ್ಸರ್ವೇಟರ್ ಆಫ್ ಫಾರೆಸ್ಟ್, ಹಾಸನ (ಐಎಲ್‌ಆರ್ 2002, ಕೆ.ಎ.ಆರ್. 1375) ನೇದರಲ್ಲಿ ಈ ಕೆಳಗಿನಂತೆ ತೀರ್ಪಾಗಿರುತ್ತದೆ.

The Contention of the owner of the seized vehicle that non-filing of a Criminal case or acquittal of the accused involved in illegal transport of forest produce, takes away the Jurisdiction of the Authorised Officers to initiate confiscation proceedings under section 71A, hence confirmed the order of confiscation.

ಆದುದರಿಂದ ಈ ಪ್ರಕರಣದಲ್ಲಿ ಜಪ್ತಿಯಾಗಿರುವ ಲಾಂಚಿನಲ್ಲಿ ಅಕ್ರಮವಾಗಿ ಗೋವಾ ರಾಜ್ಯದ ಫೆನ್ನಿಯ ಸೀಸೆಗಳನ್ನು ಸಾಗಿಸಿರುವುದನ್ನು ಅಭಿಯೋಜನೆ ಪಕ್ಷದವರು ಪ್ರಬಲವಾಗಿ ಸಮರ್ಥಿಸಿರುವುದು ಹಾಗೂ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ನಿಸ್ಸಂಶಯವಾಗಿ ನಿರೂಪಿಸಿರುವುದು ಕಂಡುಬಂದಿರುವುದರಿಂದ ಒಂದನೇ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

15. ದಿನಾಂಕ: 29.3.1993 ರಂದು ಅರ್ಜಿದಾರರಾದಂತಹ ಮಹಾದೇವ ನಾರಾಯಣ ನಾಯ್ಕ ಇವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ತಮ್ಮ ಸಾಕ್ಷ್ಯವನ್ನು ತನ್ನ ಪರ ವಕೀಲರ ಮುಖ್ಯ ವಿಚಾರಣೆಯಲ್ಲಿ ನುಡಿಯುತ್ತಾ, ತನ್ನ ಬೋಟಿನ ಹೆಸರು ದುರ್ಗಾವೀಣಾ ಆಗಿದ್ದು, ಈ ಬೋಟನ್ನು ಮೀನು ಹಿಡಿಯಲು ಉಪಯೋಗಿಸುತ್ತೇನೆಂದೂ, ಈ ಬೋಟಿನಲ್ಲಿ ಆರು ಜನರನ್ನು ಕೆಲಸಕ್ಕೆ ಇಟ್ಟುಕೊಂಡಿದ್ದೇನೆಂದೂ, ಮೀನು ಹಿಡಿದ ನಂತರ ಹೊನ್ನಾವರ ಪೋರ್ಟ್ ಬಂದರಿನಲ್ಲಿ ನಿಲ್ಲಿಸುತ್ತೇನೆಂದೂ, ದಿನಾಂಕ: 20.4.1991 ರಂದು ಹೊನ್ನಾವರ ಪೋರ್ಟ್ ಬಂದರಿನಲ್ಲಿ ಈ ಬೋಟನ್ನು ನಿಲ್ಲಿಸಿದ್ದೆ. ಮೀನು ಹಿಡಿದ ನಂತರ ತಾನು ಮನೆಗೆ ಹೋದೆನೆಂದೂ, ಈ ಬೋಟನ್ನು ತಪಾಸಣೆ ಮಾಡಿ ಕನ್ನಯ್ಯ ಬಾಬು ಹರಿಕಂತ್ರ ಮತ್ತು ಪುರಸಯ್ಯ ರಾಮ ಖಾರ್ವಿ ಇವರನ್ನು ಬೋಟ್ ಕಾಯಲು ನೇಮಿಸಿದ್ದೇನೆಂದೂ, ರಾತ್ರಿ ತಾನು ಮನೆಗೆ ಹೋಗುವ ಮುಂಚೆ ನೋಡಿದಾಗ ಯಾವುದೇ ಗೋವಾ ಫೆನ್ನಿ ಬಾಟಲಿಗಳು ಇರಲಿಲ್ಲವೆಂದೂ, ಕಾವಲುಗಾರರಿಗೆ ಯಾರನ್ನೂ ಬೋಟು ಹತ್ತಲು ಬಿಡಬಾರದೆಂದು ತಿಳಿಸಿದ್ದೇನೆಂದೂ, ತಾನು ಕಾವಲುಗಾರರನ್ನು ಈ ಬೋಟು ದುರುಪಯೋಗಪಡಿಸಿಕೊಳ್ಳದಂತೆ ನೋಡಿಕೊಳ್ಳುವಂತೆ ಇವರನ್ನು ನೇಮಿಸಿದ್ದೇನೆಂದೂ, ತಾನು ಬೆಳಿಗ್ಗೆ 5.00 ಗಂಟೆಗೆ ಬಂದಾಗ ಅಲ್ಲಿ ಬೋಟು ಇರಲಿಲ್ಲವೆಂದೂ, ಸುಮಾರು 8.00 ಗಂಟೆಗೆ ಪೊಲೀಸರು ತೆಗೆದುಕೊಂಡು ಹೋಗಿದ್ದಾರೆ ಎಂದು ಗೊತ್ತಾಯಿತೆಂದೂ, ಅಲ್ಲಿ ಆಸು-ಪಾಸಿನಲ್ಲಿ ನೂರಾರು ಬೋಟುಗಳಿದ್ದವೆಂದೂ, ಪೊಲೀಸ್ ಸ್ಟೇಶನ್ನಿನಲ್ಲಿ ವಿಚಾರಿಸಿದಾಗ ಸರಾಯಿ ಇದ್ದದಕ್ಕೆ ಜಪ್ತು ಮಾಡಿದ್ದಾರೆಂದು ಗೊತ್ತಾಯಿತೆಂದೂ, ದಿನಾಂಕ: 18.4.1991 ಹಾಗೂ 19.4.1991 ರಂದು ಹೊನ್ನಾವರ ಸಮೀಪದ ಸಮುದ್ರದಲ್ಲಿ ಈ ಬೋಟಿನಲ್ಲಿ ಮೀನು ಹಿಡಿದಿದ್ದೇನೆಂದೂ, ಬೆಳಕೊಂಡ ಫಿಶ್‌ರಿಸ್ ಸೊಸೈಟಿಗೆ 18.4.1991 ಹಾಗೂ 19.4.1991 ರಂದು ಹಿಡಿದ ಮೀನನ್ನು ಕೊಟ್ಟಿದ್ದೇವೆಂದು ದಿನಾಂಕ: 20.4.1991 ರಂದು ಫಿಶಿಂಗ ಮಾಡಿದ್ದೇನೆಂದೂ, ಈ ಬೋಟನ್ನು ತನ್ನ ಪರವಾಗಿ ಯಾರೂ ಸರಾಯಿ ಕಳ್ಳಸಾಗಾಟಕ್ಕೆ ಉಪಯೋಗಿಸಿದ್ದು ಇರುವುದಿಲ್ಲವೆಂದೂ, ಈ ಬೋಟಿನಲ್ಲಿ ಎಂದು ಕಳ್ಳ ಸರಾಯಿ ಸಾಗಾಟ ಮಾಡಿದ್ದು ಇರುವುದಿಲ್ಲವೆಂದೂ, ತನ್ನ ಮನೆ ಈ ಬೋಟು ನಿಲ್ಲಿಸಿದ ಜಾಗದಿಂದ 3 ಕಿ.ಮೀ. ಆಗುತ್ತದೆಂದೂ, ತನ್ನ ಜೀವನ ಈ ಬೋಟಿನ ಆಧಾರದಲ್ಲಿ ನಡೆಯಬೇಕೆಂದೂ, ಹೊನ್ನಾವರ ಪೊಲೀಸರು ತನ್ನ ಮೇಲೆ ಹಾಗೂ ಇತರ 4 ಜನರ ಮೇಲೆ ಸರಾಯಿ ಕಳ್ಳ ಸಾಗಾಟ

ಮಾಡಿದ ಬಗ್ಗೆ ಅಪರಾಧ ದಾಖಲು ಮಾಡಿದ್ದು, ದಿನಾಂಕ: 1.3.1993 ರಂದು ಮಾನ್ಯ ನ್ಯಾಯಾಲಯದವರು ಈ ಮೊಕದ್ದಮೆಯನ್ನು ಬಿಡುಗಡೆ ಮಾಡಿದ್ದಾರೆಂದೂ, ನುಡಿಯುತ್ತಾ, ನಂತರ ಮಾನ್ಯ ಎಡಿಪಿಯವರ ಪಾಟೀ ಸವಾಲಿನಲ್ಲಿ ದಿನಾಂಕ: 20.4.1991 ರಾತ್ರಿ 2 ಗಂಟೆಯ ಸಮಯದಲ್ಲಿ ತಾನು ಮತ್ತು ಇತರ 4 ಜನರು ಸರಾಯಿ ಕಳ್ಳಸಾಗಾಟ ಮಾಡುತ್ತಿದ್ದಾಗ ಪ್ರಕರಣ ದಾಖಲು ಮಾಡಿದ್ದಾರೆಂದು ಪ್ರಕರಣ ನೋಂದಾಯಿಸಿದ್ದು ನಿಜವಿದೆ. ಆ ಪೈಕಿ ಕನ್ನಾಬಾಬು, ಪರಸಯ್ಯಾ ಎಂಬುವರು ಪೊಲೀಸರಿಗೆ ಮಾಲು ಸಮೇತ ಸಿಕ್ಕಿದ್ದು, ತಾನು ಮತ್ತು ಇತರರು ಓಡಿ ಹೋದರೆನ್ನುವುದು ಸರಿಯಲ್ಲವೆಂದೂ, ತನಗೆ ಬೋಟು ಜಪ್ತಿ ಮಾಡಿದ್ದು ಬೆಳಿಗ್ಗೆ 8.00 ಗಂಟೆಗೆ ಗೊತ್ತಾಯಿತೆಂದೂ, ತನ್ನ ಬೋಟನ್ನು ಸುಳ್ಳು ಮಾಹಿತಿ ಮೇಲೆ ಅಮಾನತ್ತು ಪಡಿಸಿದ್ದ ಬಗ್ಗೆಯಾಗಲೀ ಅಥವಾ ಬೋಟನ್ನು ಮಧ್ಯಂತರ ಬಿಡುಗಡೆಗೆ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುವುದಿಲ್ಲ. ಈ ನ್ಯಾಯಾಲಯಕ್ಕೆ 7.5.1991 ರಂದು ಮಧ್ಯಂತರ ಬಿಡುಗಡೆಗಾಗಿ ಅರ್ಜಿ ಸಲ್ಲಿಸಿದ್ದೇನೆ. ತನ್ನ ಮೇಲೆ ಮೊಕದ್ದಮೆಯಾಗಿದ್ದರಿಂದ ತಾನು ಆರೋಪಿಯಾಗಿದ್ದರಿಂದ 7.5.1991 ರ ವರೆಗೆ ಯಾವುದೇ ಅರ್ಜಿಯನ್ನು ಹಾಕಿರುವುದಿಲ್ಲ ಎನ್ನುವುದು ಸರಿಯಲ್ಲವೆಂದೂ, ದಿನಾಂಕ: 20.4.1991 ರಂದು ಪೊಲೀಸರು ಮೊಕದ್ದಮೆ ದಾಖಲು ಮಾಡಿದ್ದಾರೆ ಎನ್ನುವುದು ಸರಿಯಲ್ಲವೆಂದೂ, ತಾನು ಉದ್ದೇಶಪೂರ್ವಕವಾಗಿ ಸರಾಯಿ ಸಾಗಾಣಿಕೆಗೆ ತನ್ನ ಬೋಟನ್ನು ಉಪಯೋಗಿಸಿದ್ದೇನೆ ಎಂಬುದು ಸರಿಯಲ್ಲವೆಂದು ನುಡಿದಿರುತ್ತಾರೆ.

16. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಅರ್ಜಿದಾರರು ಕೆಲಸಕ್ಕೆ ಇಟ್ಟುಕೊಂಡಂತಹ ಜನರ ಹೆಸರೇ ಈ ಪ್ರಕರಣದ ಆರೋಪಿಗಳ ಹೆಸರಾಗಿರುತ್ತದೆ. ಸದರಿಯವರುಗಳನ್ನು ಘಟನೆ ಸಂಭವಿಸಿದೆ ಎನ್ನಲಾದ ದಿನ ಕಾವಲಿಗಾಗಿ ನಿಲ್ಲಿಸಿರುವುದನ್ನು ಅರ್ಜಿದಾರರೇ ಒಪ್ಪಿಕೊಂಡಿದ್ದಾರೆ. ಅದೇ ರೀತಿ ಕಾವಲುಗಾರರಿಗೂ ಸಹ ಬೋಟನ್ನು ಹತ್ತಲು ಯಾರಿಗೂ ಬಿಡಬಾರದೆಂದು ಅರ್ಜಿದಾರರು ತಿಳಿಸಿದ್ದರಿಂದ ಸದರಿ ಆರೋಪಿತ ಕಾವಲುಗಾರರೇ ಈ ಕೃತ್ಯವನ್ನೆಸಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಸದರಿ ಬೋಟನ್ನು ದುರುಪಯೋಗಪಡಿಸಿಕೊಳ್ಳಬಾರದೆಂಬ ಬಗ್ಗೆ ಲಿಖಿತ ರೂಪದಲ್ಲಿ ಅರ್ಜಿದಾರರು ತನ್ನ ಕೆಲಸಗಾರರಿಗೆ ನೀಡಿರುವ ಯಾವುದೇ ದಾಖಲೆಯನ್ನು ಪ್ರಾಧಿಕಾರದಲ್ಲಿ ಹಾಜರುಪಡಿಸಿಲ್ಲ. ಬೆಳಿಗ್ಗೆ 5.00 ಗಂಟೆಗೆ ಬೋಟು ಸ್ಥಳದಲ್ಲಿ ಇರಲಿಲ್ಲವೆಂದು ಸ್ವತಃ ಅರ್ಜಿದಾರರೇ ಒಪ್ಪಿಕೊಂಡಿರುವುದರಿಂದ ಹಾಗೂ ಆ ಸಮಯದಲ್ಲಿ ಅವರ ಕೆಲಸಗಾರರು ಯಾರೂ ಕಾಣಸಿಗದಿದ್ದುದಾಗಿ ಅರ್ಜಿದಾರರೇ ಒಪ್ಪಿಕೊಂಡಿರುವುದು ಕಂಡು ಬರುತ್ತದೆ. ದಿನಾಂಕ: 18.4.1991 ಮತ್ತು 19.4.1991 ರಂದು ಮೀನನ್ನು ಹಿಡಿದಿರುವ ಬಗ್ಗೆ ವಿವರಿಸಿ, ದಾಖಲೆಯನ್ನು ಹಾಜರುಪಡಿಸಿರುವ ಅರ್ಜಿದಾರರು ದಿನಾಂಕ: 20.4.1991 ರಂದು ಮೀನು ಹಿಡಿದಿರುವ ಬಗ್ಗೆ ದಾಖಲೆಯನ್ನು ಏಕೆ ಹಾಜರುಪಡಿಸಿಲ್ಲ ಎಂಬುದನ್ನು ವಿವರಿಸಿಲ್ಲ. ಅಲ್ಲದೇ ಸದರಿ ಅರ್ಜಿದಾರರನ್ನು ಆರೋಪಿಯನ್ನಾಗಿಸಿ ಜಾಮೀನಿನ ಮೇಲೆ ಬಿಡುಗಡೆ ಮಾಡಿರುವ ದಾಖಲೆ ಇದ್ದಾಗಲೂ ಸಹ ತಾನು ಆರೋಪಿಯಾಗಿದ್ದರಿಂದ ದಿನಾಂಕ: 7.5.1991 ರವರೆಗೆ ಯಾವುದೇ ಅರ್ಜಿಯನ್ನು ಹಾಕಿಲ್ಲ ಎನ್ನುವುದು ಸರಿಯಲ್ಲವೆಂದು ನುಡಿದಿರುವುದು ಕಂಡು ಬರುತ್ತದೆ ಮತ್ತು ತನ್ನ ಲಾಂಚ್‌ನ್ನು ಪೊಲೀಸರು ಜಪ್ತು ಮಾಡಿದ ಬಗ್ಗೆ ಮಾರನೇ ದಿನವೇ ಅರ್ಜಿದಾರರಿಗೆ ತಿಳಿದರೂ ಸಹ ಪ್ರಾಧಿಕಾರದಲ್ಲಿ ಅರ್ಜಿ ಸಲ್ಲಿಸಲು 15 ದಿನಗಳಿಗಿಂತ ಹೆಚ್ಚಿನ ಸಮಯವೇಕೆ ಬೇಕಾಯಿತೆಂಬುದರ ಬಗ್ಗೆ ವಿವರಣೆಯನ್ನು ಸಮರ್ಪಕವಾಗಿ ನೀಡಿಲ್ಲ. ಒಟ್ಟಿನಲ್ಲಿ ಈ ಪ್ರಕರಣದಲ್ಲಿ ಜಪ್ತಿಯಾದಂತಹ ತಮಗೆ ಸಂಬಂಧಿಸಿದ ಲಾಂಚಿನಲ್ಲಿ ತನಗೆ ಅರಿವಿಲ್ಲದಂತೆ ಮತ್ತು ತಾನು ಶಾಮೀಲಾಗದೇ ಗೋವಾ ಫೆನ್ನಿಯ ಸಾಗಾಣಿಕೆ ಆಗಿದೆ ಎಂಬ ಅಂಶವನ್ನು ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಲು ಎದುರುದಾರರ ಪಕ್ಷದವರು ವಿಫಲರಾಗಿರುವುದು ಕಂಡು ಬರುತ್ತದೆ. ಅಲ್ಲದೇ ಈಗಾಗಲೇ ವಿವರಿಸಿರುವಂತೆ ಕ್ರಿಮಿನಲ್ ನ್ಯಾಯಾಲಯದಲ್ಲಿ ಆರೋಪಿಯು ನಿರ್ದೋಷಿಯಾಗಿದ್ದರೂ ಸಹ ಅಂತಹ ಪ್ರಕರಣದಲ್ಲಿ ಜಪ್ತಿಯಾದಂತಹ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿ ಆದೇಶವಾಗಿರುತ್ತದೆ. ಆದುದರಿಂದ ಎರಡನೆಯ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಲಾಗಿದೆ.

### ಮೂರನೆಯ ವಿವಾದಾಂಶ

17. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಮತ್ತು ಮಾನ್ಯ ಉಚ್ಚ ನ್ಯಾಯಾಲಯದ ಮೇಲ್ಕಾಣಿಸಿದ ತೀರ್ಪನ್ನು ಗಮನದಲ್ಲಿಟ್ಟುಕೊಂಡು ಈ ಪ್ರಕರಣದಲ್ಲಿ ಜಪ್ತಿ ಮಾಡಲ್ಪಟ್ಟ ಲಾಂಚಿನಲ್ಲಿ ಗೋವಾ ಸೀಲ್ಡ್ ಫೆನ್ನಿಯ ಸೀಸೆಗಳನ್ನು ಇಂಜಿನ್ ಹೊಂದಿದಂತಹ ಬೋಟಿನ ಮೂಲಕ ಹಾಗೂ ಅದರ ಪ್ರಭಾರವನ್ನು ಹೊಂದಿದಂತಹ ಇತರರು ಶಾಮೀಲಾಗಿ ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುವುದರಿಂದ ಸದರಿ ಲಾಂಚನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಗಿನಂತೆ

### ಆದೇಶ

ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊನ್ನಾವರ ಪೊಲೀಸ್ ಠಾಣೆಯ ಗುನ್ಹೆ ಸಂಖ್ಯೆ: 97/1991 ದಿನಾಂಕ: 20.4.1991 ರಲ್ಲಿ ಜಪ್ತಾದ "ದುರ್ಗಾವೀಣಾ" ಎಂಬ ಹೆಸರಿನ ಲಾಂಚ್ ಹಾಗೂ ಅದಕ್ಕೆ ಕೂಡ್ರಿಸಿರುವ ಇಂಜಿನ್ ಸಂಖ್ಯೆ: 774ಎ149 ನೇದನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಈ ಪ್ರಾಧಿಕಾರದ ಮಧ್ಯಂತರ ಆದೇಶ ಸಂಖ್ಯೆ: ಇಸಿ/239/91-92, ದಿನಾಂಕ: 12.3.1992 ನೇದನ್ನು ಈ ಮೂಲಕ ಹಿಂತೆಗೆದುಕೊಂಡಿರುತ್ತೇನೆ.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸವಿಯ ಆಗಸ್ಟ್ ತಿಂಗಳ 25ನೇ ತಾರೀಖಿನಂದು ವಿಷಯನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ತಪ್ಪುಗಳನ್ನು ತಿದ್ದಿ, ಗಣಕೀಕೃತಗೊಳಿಸಿ, ಪ್ರಾಧಿಕಾರದ ಸೀಲ್ ಮೊಹರಿನೊಂದಿಗೆ ಹೊರಡಿಸಲಾಗಿದೆ).

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿಗೆ ಬರುವುದು.

**ಕೆ.ಸಿ. ಹರಿದಾಸ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ - 1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ. ನಂ. 1 : ಎಂ. ಕೃಷ್ಣಮೂರ್ತಿ, ಪಿ.ಎಸ್.ಐ.

ಪ್ರಾ.ಸಾ. ನಂ. 2 : ಕೇಶವ ಕೃಷ್ಣ ನಾಯ್ಕ

**ಅನುಬಂಧ - 2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

ಡಿ.ಡಬ್ಲ್ಯೂ ನಂ. 1 : ಮಹಾದೇವ ನಾರಾಯಣ ಹರಿಕಂತ್ರ

**ಅನುಬಂಧ - 3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ 1 : ಪಂಚನಾಮೆ

ನಿಶಾನೆ ಪಿ 1ಎ : ಪಂಚನಾಮೆ ಮೇಲಿನ ಸಹಿ

ನಿಶಾನೆ ಪಿ 2 : ಪ್ರ.ಮಾ. ವರದಿ

ನಿಶಾನೆ ಪಿ 2ಎ : ಪ್ರ.ಮಾ. ವರದಿ ಮೇಲಿನ ಸಹಿ

ನಿಶಾನೆ ಪಿ3 : ಫಿರ್ಯಾದು

ನಿಶಾನೆ ಪಿ4 : ರಾ.ವಿ. ಗೆ ಬರೆದ ಪತ್ರ

**ಅನುಬಂಧ - 4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಡಿ 1 : ಮೀನು ವಿತರಿಸಿದ ಪಟ್ಟಿ

**ಕೆ.ಸಿ. ಹರಿದಾಸ್**

ಪಿ.ಆರ್. 1236 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಸಂಖ್ಯೆ: ಎಲ್.ಆರ್.ಎಫ್/ಸಿಆರ್-20/2002-03, ದಿನಾಂಕ: 22ನೇ ಜೂನ್ 2004**

**ಅಧಿಕೃತ ಜ್ಞಾಪನ**

**ವಿಷಯ:-** ಬಿ.ಎಂ. ಶ್ರೀನಿವಾಸಯ್ಯ ಎಜುಕೇಷನಲ್ ಟ್ರಸ್ಟ್ ಬುಲ್ ಟೆಂಪಲ್ ರಸ್ತೆ, ಪೋಸ್ಟ್ ಬಾಕ್ಸ್ ನಂ. 1908, ಬೆಂಗಳೂರು-19 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ, ಅವಲಹಳ್ಳಿ ಗ್ರಾಮದ ಸ.ನಂ. 117/2ಎ ರಲ್ಲಿ 0-04 ಎಕರೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಬಿ.ಎಂ. ಶ್ರೀನಿವಾಸಯ್ಯ ಎಜುಕೇಷನಲ್ ಟ್ರಸ್ಟ್ ಬುಲ್ ಟೆಂಪಲ್ ರಸ್ತೆ, ಪೋಸ್ಟ್ ಬಾಕ್ಸ್ ನಂ. 1908, ಬೆಂಗಳೂರು-19 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ, ಅವಲಹಳ್ಳಿ ಗ್ರಾಮದ ಸ.ನಂ. 117/2ಎ ರಲ್ಲಿ 0-04 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ (ಎಜುಕೇಷನ್ ಪಾರ್ಕ್, ಮ್ಯೂಜಿಯಂ) ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ಮಾಡಿರುವ ಬೇಡಿಕೆ ಹಾಗೂ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ 15ಎ ಮತ್ತು ನಮೂನೆ 15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು ಬೆಂಗಳೂರು ಉತ್ತರ ಉಪವಿಭಾಗ ತಾಲ್ಲೂಕು ರವರ ಪತ್ರ ಸಂ: ಎಲ್.ಆರ್.ಎಫ್.ಎನ್.ಎ. ಸಿ.ಆರ್. 113/03-04 ದಿ: 28.5.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂ. 117/2ಎ ರಲ್ಲಿ 0-04 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(i)(ii) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯ ನಂ. 2944/57-58 ದಿನಾಂಕ: 31.3.1958 ರಂದು ನೋಂದಾಯಿಸಲ್ಪಟ್ಟಿದೆ. ಸದರಿ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಒಪ್ಪಂದದ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಭೂ ಮಂಜೂರಾತಿ ನಿಯಮಾವಳಿಗಳ ವ್ಯಾಪ್ತಿಗೆ ಒಳಪಡುವುದಿಲ್ಲವೆಂದು ತಿಳಿಸಿರುತ್ತಾರೆ.

**ಆದೇಶ**

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರಡಿ ಶಿಕ್ಷಣ ಸಂಸ್ಥೆ ಸ್ಥಾಪನೆಗೆ 4 ಯುನಿಟ್‌ಗಳಿದ್ದು ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(i)(ii) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ, ಅವಲಹಳ್ಳಿ ಗ್ರಾಮದ ಸ.ನಂ. 117/2ಎ ರಲ್ಲಿ 0-04 ಎಕರೆ ಜಮೀನನ್ನು ಬಿ.ಎಂ. ಶ್ರೀನಿವಾಸಯ್ಯ ಎಜುಕೇಷನಲ್ ಟ್ರಸ್ಟ್ ಬುಲ್ ಟೆಂಪಲ್ ರಸ್ತೆ ಪೋಸ್ಟ್ ಬಾಕ್ಸ್ ನಂ. 1908, ಬೆಂಗಳೂರು-19 ಬೆಂಗಳೂರು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(i)(ii) ರಡಿ ಹಾಗೂ ಸರ್ಕಾರದ ಅಧಿಸೂಚನೆ ತಿದ್ದುಪಡಿ ಸಂ: ಶಾಇ 47 ಶಾಸನ 2001

ಬೆಂಗಳೂರು ದಿ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳವರೆಗೆ ಜಮೀನನ್ನು ನೀಡಲು ಅವಕಾಶ ಕಲ್ಪಿಸಿದೆ. ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೇ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ಲಿಖಿತ ಮಾಹಿತಿಯನ್ನು ತಹಶೀಲ್ದಾರ್ ರವರ ಮುಖಾಂತರ ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956 ಕಲಂ 38 ರಲ್ಲಿ ಹೇಳಿರುವಂತೆ ಶೇಕಡ 55 ಪೇಯಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಬೇರೆ ರೀತಿ ವರ್ಗಾವಣೆ ಮಾಡಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆ ಅವಶ್ಯಕತೆ ಇದ್ದಲ್ಲಿ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿಯು ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾಯ್ದೆಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಗಳಡಿ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1224 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಸಂಖ್ಯೆ: ಎಲ್.ಆರ್.ಎಫ್/ಸಿಆರ್-7/2004-05, ದಿನಾಂಕ: 17ನೇ ಆಗಸ್ಟ್ 2004**

**ಅಧಿಸೂಚನೆ**

**ವಿಷಯ:-** ಮೌಂಟ್ ಕಾರ್ಮಲ್ ಎಜುಕೇಷನ್ ಸೊಸೈಟಿ 58 (ಹಳೇ ನಂ. 21) ಪ್ಯಾಲೇಸ್ ರಸ್ತೆ, ಬೆಂಗಳೂರು-52 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ ರಾಮಗೊಂಡನಹಳ್ಳಿ ಗ್ರಾಮದ ಸ.ನಂ. 14/1 ರಿಂದ 14/10 ಎ.ಬಿ.ಸಿ. ರಲ್ಲಿ 7-06 ಎಕರೆ/ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಮೌಂಟ್ ಕಾರ್ಮಲ್ ಎಜುಕೇಷನ್ ಸೊಸೈಟಿ 58 (ಹಳೇ ನಂ. 21) ಪ್ಯಾಲೇಸ್ ರಸ್ತೆ, ಬೆಂಗಳೂರು-52 ಇವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ, ರಾಮಗೊಂಡನಹಳ್ಳಿ ಗ್ರಾಮದ ಸರ್ವೆ ನಂ. 14/1 ರಲ್ಲಿ 0-10$^3/_4$, 14/2 ರಲ್ಲಿ 0-11$^1/_4$, 14/3 ರಲ್ಲಿ 0-25$^1/_4$, 14/4 ರಲ್ಲಿ 0-28, 14/5 ರಲ್ಲಿ 0-31, 14/6 ರಲ್ಲಿ 0-25, 14/7 ರಲ್ಲಿ 0-39, 14/8 ರಲ್ಲಿ 1-00, 14/9 ರಲ್ಲಿ 1-03, 14/10ಎ ರಲ್ಲಿ 0-24, 14/10ಬಿ ರಲ್ಲಿ 0-09, 14/10ಸಿ ರಲ್ಲಿ 0-12 ಒಟ್ಟು 7-19 ಎಕರೆ/ಗುಂಟೆ ಈ ಪೈಕಿ 7-06 ಎಕರೆ/ಗುಂಟೆ ಜಮೀನನ್ನು ಶೈಕ್ಷಣಿಕ ಮತ್ತು ಚಾರಿಟೇಬಲ್ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್:ಸಿ.ಆರ್.20/04-05 ದಿ: 14.6.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 14/1 ರಿಂದ 14/10 ಎ.ಬಿ.ಸಿ. ರಲ್ಲಿ 7-06 ಎಕರೆ/ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(i)(ii) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನಂ. 1/1963-64 ದಿನಾಂಕ: 9.4.1963 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಒಪ್ಪಂದದ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರ ಪ್ರಕಾರ ಶೈಕ್ಷಣಿಕ ಮತ್ತು ಚಾರಿಟೇಬಲ್ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(i)(ii) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ, ರಾಮಗೊಂಡನಹಳ್ಳಿ ಗ್ರಾಮದ 14/1 ರಿಂದ 14/10 ಎ.ಬಿ.ಸಿ. ರಲ್ಲಿ 7-06 ಎಕರೆ/ಗುಂಟೆ ಜಮೀನನ್ನು ಮೌಂಟ್ ಕಾರ್ಮಲ್ ಎಜುಕೇಷನ್ ಸೊಸೈಟಿ 58 (ಹಳೇ ನಂ. 21) ಪ್ಯಾಲೇಸ್ ರಸ್ತೆ, ಬೆಂಗಳೂರು-52

ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(i)(ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂ: ಶಾಇ 47 ಶಾಸನ 2001 ಬೆಂಗಳೂರು ದಿ: 23.4.2003 ರಂತೆ ಶೈಕ್ಷಣಿಕ ಮತ್ತು ಚಾರಿಟೇಬಲ್ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಜಮೀನನ್ನು ನೀಡಲು ಅವಕಾಶ ಕಲ್ಪಿಸಿದೆ. ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೇ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆಯ ಅವಶ್ಯಕತೆ ಇದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿಯು ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಗಳಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1225 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ.

**ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ) ಮತ್ತು ಹೆಚ್ಚುವರಿ ಜೆಎಂಎಫ್‌ಸಿ ನ್ಯಾಯಾಲಯ, ಸಾಗರ**

**ಸಿ. ಮಿಸ್ ನಂ. 167-2003**

**ಪಿ.ಆರ್. ನಂ.**

**ಫಿರ್ಯಾದಿದಾರರು:-** **-ವಿ-** **ಎದುರುದಾರರು:-**

ಸಾಗರ ಗ್ರಾಮಾಂತರ ಠಾಣೆ ಇಲ್ಲ

**ಸಾರ್ವಜನಿಕ ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಕೆಳಗೆ ಕಾಣಿಸಿದ ಒಂದು ಹಸಿರು ಬಣ್ಣದ ಕೆಎ-15 ಹೆಚ್-2646 ನಂಬರ್ ಇರುವ ಎಕ್ಸೆಲ್ ಹೆವಿಡ್ಯೂಟಿ ಮೊಪೈಡ್ ಛಾಸಿ ನಂ. ಪಿ-3010 ಎಫ್ 349506, ಇಂಜಿನ್ ನಂ. ಪಿಎ-1010 ಎಂ-344758 ವಾಹನವನ್ನು ಸಾಗರ ಗ್ರಾಮಾಂತರ ಪೊಲೀಸರು ಪಿ.ಎಫ್. ಸಂಖ್ಯೆ: 200-2001 ದಿನಾಂಕ: 14.12.2001 ರಡಿಯಲ್ಲಿ ವಶಪಡಿಸಿಕೊಂಡು ಪ್ರಕರಣ ದಾಖಲು ಮಾಡಿದ್ದು ಸದರಿ ವಾಹನದ ಮಾಲೀಕರು ಯಾರು ಎಂದು ಈವರೆಗೂ ಪತ್ತೆಯಾಗಿರುವುದಿಲ್ಲ. ಆದ್ದರಿಂದ ಈ ಪ್ರಕಟಣೆ ಹೊರಡಿಸಿದ ದಿನಾಂಕದಿಂದ 6 ತಿಂಗಳ ಒಳಗಾಗಿ ಸದರಿ ವಾಹನದ ವಾರಸುದಾರರಾಗಲಿ ಹಕ್ಕುದಾರರಾಗಲಿ ಇದ್ದಲ್ಲಿ ಸದರಿ ವಾಹನವನ್ನು ತಮ್ಮದೆಂದು ಗುರುತಿಸುವ ಸಲುವಾಗಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಬಹುದು. ತಪ್ಪಿದಲ್ಲಿ ಸದರಿ ವಾಹನದ ವಾರಸುದಾರರು ಯಾರು ಇಲ್ಲ ಎಂದು ತಿಳಿದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಅನುಸೂಚಿ**

| ಕ್ರಮ ಸಂಖ್ಯೆ | ಸ್ವತ್ತಿನ ವಿವರ | ಪ್ರಕರಣದ ನಂಬರ್ ಪಿ.ಆರ್. ನಂಬರ್ ಪಿ.ಎಫ್. ನಂಬರ್ | ವಶಪಡಿಸಿಕೊಂಡ ದಿನಾಂಕ |
|---|---|---|---|
| 1 | ಒಂದು ಹಸಿರು ಬಣ್ಣದ ಕೆಎ-15 ಹೆಚ್-2646 ನಂಬರ್ ಇರುವ ಎಕ್ಸೆಲ್ ಹೆವಿ ಡ್ಯೂಟಿ ಮೊಪೈಡ್ ಛಾಸಿ ನಂ. ಪಿ-3010 ಎಫ್ 349506 ಇಂಜಿನ್ ನಂ. ಪಿ-1010 ಎಂ 344758 | ಸಿ.ಮಿಸ್. 167-2003 ಪಿ.ಎಫ್. 200-2001 ಪಿ.ಆರ್. | 14.12.2001 |

ಸಾಗರ, ಹೆಚ್ಚುವರಿ ಸಿವಿಲ್ ಜಡ್ಜ್ (ಕಿ.ವಿ) ಮತ್ತು ಹೆಚ್ಚುವರಿ ಜೆಎಂಎಫ್‌ಸಿ,

ದಿನಾಂಕ: 12.8.2004 ಸಾಗರ.

ಪಿ.ಆರ್. 1226

## ಕೃಷಿ ಮಾರಾಟ ಇಲಾಖೆ

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು-01

## ಅಧಿಸೂಚನೆ

**ಸಂಖ್ಯೆ: ಕೃಮಾಇ/169/ನಿಯವಿ/2004, ದಿನಾಂಕ: 20ನೇ ಜುಲೈ 2004**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 6ರ ಉಪಪ್ರಕರಣ (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು ನಿಪ್ಪಾಣಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಾರುಕಟ್ಟೆ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರಿ ಅಧಿಸೂಚನೆಗಳ ಮೂಲಕ ಮಾರಾಟ ನಿಯಂತ್ರಣಕ್ಕೆ ಒಳಪಡಿಸಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಚಿಕ್ಕೋಡಿ ತಾಲ್ಲೂಕಿನ "ಸದಲಗಾ" ಗ್ರಾಮ ಪಂಚಾಯಿತಿ ಪರಿಮಿತಿಯೊಳಗಿನ ಪ್ರದೇಶವನ್ನು "ಉಪಮಾರುಕಟ್ಟೆ" ಎಂದು ಮತ್ತು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು "ಉಪ ಮಾರುಕಟ್ಟೆ ಪ್ರಾಂಗಣ" ಎಂದು ಈ ಮೂಲಕ ಘೋಷಿಸಿದ್ದೇನೆ.

## ನಿಯಂತ್ರಣಕ್ಕೊಳಪಡಿಸಿರುವ ಕೃಷಿ ಉತ್ಪನ್ನಗಳು

1. ಜಾನುವಾರುಗಳು, 2. ಮೇಕೆಗಳು, 3. ಕುರಿಗಳು, 4. ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6. ಸಜ್ಜೆ, 7. ಜವೆ ಗೋಧಿ, 8. ಜೋಳ, 9. ಕಂಬು, 10. ಮೆಕ್ಕೆ ಜೋಳ, 11. ನವಣೆ, 12. ಭತ್ತ, 13. ರಾಗಿ, 14. ಅಕ್ಕಿ, 15. ಸಾಮೆ (ಸಾವೆ), 16. ಗೋಧಿ, 17. ಅಂಟುವಾಳ, 18. ಬೊಂಬು, 19. ಬೆತ್ತ, 20. ಹಿಪ್ಪೆಬೀಜ, 21. ಹೊಂಗೇಬೀಜ, 22. ಬೇವಿನಬೀಜ, 23. ಸೀಗೇಕಾಯಿ, 24. ಹುಣಸೇಹಣ್ಣು, 25. ಹುಣಸೇಬೀಜ, 26. ಸೇಬು, 27. ಬಾಳೆಹಣ್ಣು, 28. ಬೋರೆಹಣ್ಣು, 29. ಹುಳಿಹಣ್ಣುಗಳು, 30. ಚಕ್ಕೋತನ ಹಣ್ಣು, 31. ಪೇರಲೆಹಣ್ಣು (ಸೀಬೆಹಣ್ಣು), 32. ದ್ರಾಕ್ಷಿ, 33. ಹಲಸಿನಹಣ್ಣು, 34. ಜಂಬುನೇರಳೆ ಹಣ್ಣು, 35. ನಿಂಬೆಹಣ್ಣು, 36. ಕರಬೂಜ, 37. ಮಾವಿನಹಣ್ಣು, 38. ಮೂಸಂಬಿ, 39. ಮರಸೇಬು, 40. ಪೈನಾಪಲ್ (ಅನಾನಸ್), 41. ಪಪ್ಪಾಯಿಹಣ್ಣು (ಪರಂಗಿಹಣ್ಣು), 42. ದಾಳಿಂಬೆಹಣ್ಣು, 43. ಸಪೋಟಾ, 44. ಸಿದ್ದೋಟ, 45. ಕಿತ್ತಳೆ, 46. ಕಲ್ಲಂಗಡಿ, 47. ನೆಲಗಡಲೆ (ಶೇಂಗಾ) (ಕಾಯಿ ಮತ್ತು ಬೀಜ), 48. ಹರಳುಬೀಜ, 49. ಹತ್ತಿಬೀಜ, 50. ಅಗಸೆಬೀಜ, 51. ಸಾಸುವೆ, 52. ಹುಚ್ಚೆಳ್ಳು, 53. ಕುಸುಬೆ, 54. ಎಳ್ಳು, 55. ಸೂರ್ಯಕಾಂತಿಬೀಜ, 56. ಸೋಯಾಬಿನ್, 57. ಅಡಿಕೆ, 58. ಗೋಡಂಬಿಬೀಜ, 59. ಒಣಮೆಣಸಿನಕಾಯಿ, 60. ತೆಂಗಿನಕಾಯಿ, 61. ಕೊಬ್ಬರಿ, 62. ಕೊತ್ತಂಬರಿಬೀಜ (ಧನಿಯಾ), 63. ಬೆಳ್ಳುಳ್ಳಿ, 64. ಶುಂಠಿ, 65. ಮೆಂತ್ಯ, 66. ಕಾಳುಮೆಣಸು, 67. ಅರಿಶಿನ, 68. ಅಲಸಂದೆ (ಇಡೀ ಮತ್ತು ಒಡೆದ), 69. ಅವರೆ (ಇಡೀ ಮತ್ತು ಒಡೆದ), 70. ಕಡಲೆ (ಇಡೀ ಮತ್ತು ಒಡೆದ), 71. ಉದ್ದು (ಇಡೀ ಮತ್ತು ಒಡೆದ), 72. ಬುಲ್ಲರ್ (ಇಡೀ ಮತ್ತು ಒಡೆದ), 73. ಹೆಸರು (ಇಡೀ ಮತ್ತು ಒಡೆದ), 74. ಹುರುಳಿ, 75. ಲಾಕ್ (ಇಡೀ ಮತ್ತು ಒಡೆದ), 76. ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77. ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78. ಬಟಾಣಿ, 79. ತೊಗರಿ (ಇಡೀ ಮತ್ತು ಒಡೆದ), 80. ಮೋತ್ (ಇಡೀ ಮತ್ತು ಒಡೆದ), 81. ಎಲ್ಲಾ ತರಕಾರಿಗಳು (ಗರ್ಕಿನ್ ಹೊರತುಪಡಿಸಿ ಸೊಪ್ಪುಗಳು ಸೇರಿಸಿ), 82. ಕಾಯಿಗಳು, 83. ಹಸಿರುಮೆಣಸಿನ ಕಾಯಿ, 84. ಈರುಳ್ಳಿ, 85. ಆಲೂಗಡ್ಡೆ, 86. ಸುವರ್ಣಗೆಡ್ಡೆ, 87. ಸಿಹಿಗೆಣಸು (ಗೆಣಸು), 88. ಟೊಮ್ಯೊಟೋ, 89. ಬೀಟೆ (ರೋಸ್‌ವುಡ್), 90. ಬಿಲ್ವಾಲ, 91. ಉರುವಲು ಕಟ್ಟಿಗೆ, 92. ಗಂಜಾನ್, 93. ಹಡಗ, 94. ಹಳದಿ, 95. ಹನಿಮತ್ತಲ್, 96. ಹೊನ್ನೆ, 97. ಐಯಾನಿ, 98. ಹಲಸಿನಮರ, 99. ಜಂಬ, 100. ಕಲನ್, 101. ಕಿಂಡಲ್, 102. ಮಾವಿನಮರ, 103. ಮತ್ತಿ, 104. ನಂದಿ, 105. ರಾಂಪತ್ರೆ, 106. ತೇಗ (ಸಾಗವಾನಿ), 107. ಬಿಳಿ ದೇವದಾರು (ಕೇದರ), 108. ಸಿಲ್ವರ್ ಓಕ್, 109. ನೀಲಗಿರಿ, 110. ವೀಳ್ಯೆದೆಲೆ, 111. ಬೆಲ್ಲ, 112. ತೆಂಗಿನಕಡ್ಡಿ, 113. ಒಣದ್ರಾಕ್ಷಿ.

## ಅನುಸೂಚಿ

ಚಿಕ್ಕೋಡಿ ತಾಲ್ಲೂಕಿನ ಸದಲಗಾ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಈ ಕೆಳಗಿನ ಸೀಮಾಬದ್ಧ ಸ್ಥಳ;

| | | |
|---|---|---|
| ಪೂರ್ವಕ್ಕೆ | - | ಮಲಿಕ ವಾಡಗ್ರಾಮ |
| ಪಶ್ಚಿಮಕ್ಕೆ | - | ಶಮನೆವಾಡಿ ಗ್ರಾಮ |
| ದಕ್ಷಿಣಕ್ಕೆ | - | ನೇಜ ಗ್ರಾಮ |
| ಉತ್ತರಕ್ಕೆ | - | ದೂದಗಂಗಾ ನದಿ ಹಾಗೂ ಜನವಾಡ ಮತ್ತು ಬೊರಗಾಂವ್ ಗ್ರಾಮಗಳು |

**ಸೈಯದ್ ಜಮೀರ್ ಪಾಷಾ**

ಪಿ.ಆರ್. 1227 ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು.

## ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ

**ಸಂ. ಎ3(ಬಿ1):ಅಮೊ:ಶ್ರೀಗಂಧ:ಸ್ಕೂಟರ್:8657/2001-02, ದಿನಾಂಕ: 7ನೇ ಆಗಸ್ಟ್ 2004**

**ವಿಷಯ:** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಬಜಾಜ್ ಸ್ಕೂಟರ್ ನೋಂದಣಿ ಸಂಖ್ಯೆ: ಎಂ.ಇ.ಎಸ್.-8657 ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:** 1) ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರ ಪತ್ರದ ಸಂಖ್ಯೆ: ಹವಸಿ: 221/2001-02, ದಿನಾಂಕ: 18.8.2001.

2) ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ: 23.11.2001ರ ಪ್ರಕಟಣೆ ಕ್ರಾಂತಿದೀಪ ಕನ್ನಡ ದಿನ ಪತ್ರಿಕೆಯಲ್ಲಿ ದಿನಾಂಕ: 26.12.2001 ರಂದು ಪ್ರಕಟವಾಗಿರುತ್ತದೆ.

**ಪ್ರಕರಣದ ಹಿನ್ನೆಲೆ:**

ಹಣಗೆರೆ ವನ್ಯಜೀವಿ ವಲಯದ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಗಳು ಬರುವ ಬೀಟಿನ ಗಸ್ತು ಮಾಡಲು ಇಲಾಖಾ ವಾಹನದಲ್ಲಿ ಹೋಗುತ್ತಿದ್ದಾಗ, ರಿಪ್ಪನ್‌ಪೇಟೆ-ಮೂಗುಡ್ತಿ ರಸ್ತೆಯ ಮಳವಳ್ಳಿ ಊರಿಗೆ ಹೋಗುವ ಅಡ್ಡ ರಸ್ತೆಯಲ್ಲಿ ಅಕ್ರಮವಾಗಿ ಬಜಾಜ್ ಸ್ಕೂಟರ್ ನೋಂದಣಿ ಸಂಖ್ಯೆ: ಎಂ.ಇ.ಎಸ್.-8657 ರಲ್ಲಿ ಸಾಗಾಣಿಕೆ ಮಾಡುತ್ತಿದ್ದ 20 ಸಂಖ್ಯೆಯ ಶ್ರೀಗಂಧ ತುಂಡುಗಳು 8.300 ಕೆ.ಜಿ. ಮತ್ತು ಶ್ರೀಗಂಧದ ಚಕ್ಕೆಗಳು 11.200 ಕೆ.ಜಿ. ಒಟ್ಟು 19.500 ಕೆ.ಜಿ. ಶ್ರೀಗಂಧವನ್ನು ಪತ್ತೆ ಹಚ್ಚಿ, ವಾಹನ ಸಮೇತ ಸರ್ಕಾರಿ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆ ದಾಖಲು ಮಾಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963 ರ ಕಲಂ 84, 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಸೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ ಮತ್ತು ಶ್ರೀಗಂಧ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರು ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ, ತಿಳುವಳಿಕೆ ಪತ್ರವನ್ನು ಕನ್ನಡ ದಿನಪತ್ರಿಕೆಯಾದ, ಕ್ರಾಂತಿದೀಪದಲ್ಲಿ ದಿನಾಂಕ: 26.12.2001 ರಂದು ಪ್ರಕಟಿಸಲಾಗಿರುತ್ತದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರು ನೀಡಿದ ಬಿ. ಎಕ್ಸ್ಟ್ರಾಕ್ಟ್ ಪ್ರಕಾರ ವಾಹನದ ಮೂಲ ಖರೀದಿದಾರರಿಗೆ, ವಾಹನದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವ ಸಂಬಂಧ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಸೂಕ್ತ ಸಮಜಾಯಿಷಿ ನೀಡಲು ನೋಟೀಸ್ ನೀಡಲಾಗಿರುತ್ತದೆ. ವಾಹನದ ಮೂಲ ಖರೀದಿದಾರರು ಸದರಿ ವಾಹನವನ್ನು ಬೇರೊಬ್ಬರಿಗೆ ಮಾರಾಟ ಮಾಡಲಾಗಿರುತ್ತದೆ ಎಂಬುದಾಗಿ ತಿಳಿಸಿದ ಮೇರೆಗೆ, ಸದರಿಯವರಿಗೂ ಸಹ ನೋಟೀಸ್ ನೀಡಲಾಗಿರುತ್ತದೆ. ನೋಟೀಸ್‌ಗೆ ಜವಾಬಾಗಲೀ ಅಥವಾ ಖುದ್ದು ಈ ನ್ಯಾಯಾಲಯಕ್ಕೆ ಬಂದು, ಹೇಳಿಕೆಯನ್ನಾಗಲೀ ನೀಡಿರುವುದಿಲ್ಲ. ಸಾಕಷ್ಟು ಕಾಲಾವಕಾಶ ಕೊಟ್ಟರೂ ಸದರಿ ವಾಹನದ ಬಗ್ಗೆ ತಮ್ಮ ಮಾಲೀಕತ್ವವನ್ನು ದೃಢೀಕರಿಸಿ, ವಾಹನವನ್ನು ವಶಕ್ಕೆ ಇದುವರೆಗೆ ಕೋರದೇ ಇರುವುದನ್ನು ನೋಡಿದರೆ, ಈ ವಾಹನ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಂತಹ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ, ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಬಜಾಜ್ ಸ್ಕೂಟರ್ ನೋಂದಣಿ ಸಂಖ್ಯೆ: ಎಂ.ಇ.ಎಸ್.-8657 (ಎಂಜೀನ್ ಸಂಖ್ಯೆ 05E-8007043904 ಛಾಸ್ಸಿ ಸಂಖ್ಯೆ 05E8007026866) ಮತ್ತು 20 ಸಂಖ್ಯೆಯ ಶ್ರೀಗಂಧ ತುಂಡುಗಳು 8.300 ಕೆ.ಜಿ. ಮತ್ತು ಶ್ರೀಗಂಧದ ಚಕ್ಕೆಗಳು 11.200 ಕೆ.ಜಿ., ಒಟ್ಟು 19.500 ಕೆ.ಜಿ. ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಹಾಗೂ ಶ್ರೀಗಂಧ ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 07.8.2004 ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**

ಪಿ.ಆರ್. 1228

ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂ. ಎ3(ಬಿ1):ಅಮೊ:ಬೀಟೆ:ಸ್ಕೂಟರ್:23/2002-03, ದಿನಾಂಕ: 7ನೇ ಆಗಸ್ಟ್ 2004**

**ವಿಷಯ:** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಬಜಾಜ್ ಕಬ್ ಸ್ಕೂಟರ್ ನೋಂದಣಿ ಸಂಖ್ಯೆ: ಕೆಎ-14-ಇ-23 ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:** 1) ವಲಯ ಅರಣ್ಯಾಧಿಕಾರಿ, ಶಿವಮೊಗ್ಗ ವನ್ಯಜೀವಿ ವಲಯ, ಶಿವಮೊಗ್ಗ ಇವರ ಪತ್ರದ ಸಂಖ್ಯೆ: ವಅಅ:ಶಿವಜೀವ:23:2002-03, ದಿನಾಂಕ: 7.5.2002.

2) ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ: 24.08.2002ರ ಪ್ರಕಟಣೆ ಸಂಯುಕ್ತ ಕರ್ನಾಟಕ ಕನ್ನಡ ದಿನ ಪತ್ರಿಕೆಯಲ್ಲಿ ದಿನಾಂಕ: 12.9.2002 ರಲ್ಲಿ ಪ್ರಕಟವಾಗಿರುತ್ತದೆ.

**ಪ್ರಕರಣದ ಹಿನ್ನೆಲೆ:**

ಶಿವಮೊಗ್ಗ ವನ್ಯಜೀವಿ ವಲಯದ ಅನುಪಿನಕಟ್ಟೆ ಶಾಖೆಯ ವನಪಾಲಕರು ಹಾಗೂ ಸಿಬ್ಬಂದಿಗಳು ಖಚಿತ ವರ್ತಮಾನದ ಮೇರೆಗೆ, ದಿನಾಂಕ: 5.5.2002 ರಂದು, ಶಂಕರ ಮನ್ನಾ ಜಂಗಲಿಯ ಗೌಳಿಗರ ಕ್ಯಾಂಪ್ ಹತ್ತಿರದ ಡಿ ಲೈನ್ ಬಳಿ ಕಾಯುತ್ತಿದ್ದಾಗ, ಬಜಾಜ್ ಕಬ್ ಸ್ಕೂಟರ್ ನೋಂದಣಿ ಸಂಖ್ಯೆ: ಕೆಎ-14-ಇ-23 ರಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ ಬೀಟೆ ತುಂಡನ್ನು ಕಂಡು, ಪ್ರಮಾಣ 0.070 ಘ.ಮೀ., ಬೀಟೆ ತುಂಡು ಮತ್ತು ವಾಹನವನ್ನು ಸರ್ಕಾರಿ ಪರ ಅಮಾನತ್ತುಪಡಿಸಿ ಅರಣ್ಯ ಮೊಕದ್ದಮೆ ದಾಖಲು ಮಾಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 104ಎ, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ ಮತ್ತು ಬೀಟೆ ತುಂಡು ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963 ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರು ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಬೀಟೆ ತುಂಡಿನ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ, ತಿಳುವಳಿಕೆ ಪತ್ರವನ್ನು ಕನ್ನಡ ದಿನಪತ್ರಿಕೆಯಾದ, ಸಂಯುಕ್ತ ಕರ್ನಾಟಕದಲ್ಲಿ ದಿನಾಂಕ: 12.9.2002 ರಂದು ಪ್ರಕಟಿಸಲಾಗಿರುತ್ತದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರು ನೀಡಿದ ಬಿ ಎಕ್ಸ್ಟ್ರ್ಯಾಕ್ಟ್ ಪ್ರಕಾರ ವಾಹನದ ಮೂಲ ಖರೀದಿದಾರರಿಗೆ, ವಾಹನದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವ ಸಂಬಂಧ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಸೂಕ್ತ ಸಮಜಾಯಿಷಿ ನೀಡಲು ನೋಟೀಸ್ ನೀಡಲಾಗಿರುತ್ತದೆ. ಈ ನೋಟೀಸ್‌ಗೆ ಜವಾಬಾಗಲೀ ಅಥವಾ ಖುದ್ದು ಈ ನ್ಯಾಯಾಲಯಕ್ಕೆ ಬಂದು, ಹೇಳಿಕೆಯನ್ನಾಗಲೀ ನೀಡಿರುವುದಿಲ್ಲ. ಸಾಕಷ್ಟು ಕಾಲಾವಕಾಶ ಕೊಟ್ಟರೂ ಸದರಿ ವಾಹನದ ಬಗ್ಗೆ ತಮ್ಮ ಮಾಲೀಕತ್ವವನ್ನು ದೃಢೀಕರಿಸಿ, ವಾಹನವನ್ನು ವಶಕ್ಕೆ ಇದುವರೆಗೆ ಕೋರದೇ ಇರುವುದನ್ನು ನೋಡಿದರೆ, ಈ ವಾಹನ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಂತಹ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ, ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಬಜಾಜ್ ಕಬ್ ಸ್ಕೂಟರ್ ನೋಂದಣಿ ಸಂಖ್ಯೆ: ಕೆಎ-14-ಇ-23 (ಎಂಜೀನ್ ಸಂಖ್ಯೆ ಎಂ10ಬಿಎಫ್004593, ಛಾಸ್ಸಿ ಸಂಖ್ಯೆ ಇಲ್ಲ) ಮತ್ತು ಬೀಟೆ ತುಂಡು 1=0.070 ಘ.ಮೀ. ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಹಾಗೂ ಬೀಟೆ ತುಂಡು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 07.8.2004 ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 1229

**OPTIVISION PRIVATE LIMITED (Under Liquidation)**
**Regd Off: Ashirwad, #1, 5th Block, Jayanagar, Bangalore-560 041**
**NOTICE CONVENING FINAL MEETING**

Notice is hereby given in pursuance of section 497/*509 that a General meeting of the members of the above named company will be held at Bangalore on Friday, 15th October 2004 at 10.30 am in the morning for the purpose of having an account laid before them showing the manner in which the winding-up has been conducted and the property of the company disposed off and of hearing any explanation that may be given by the liquidator and also of determining by a special resolution of the company, the manner in which the books, accounts and documents of the company and of the liquidator shall be disposed of.

Dated this 8th day of September 2004

**V.V. Gunjal**
Signature of the Liquidator

PD-64

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂ. ಎ3(ಬಿ1):ಅಮೊ:ಶ್ರೀಗಂಧ:ಅಂಬಾಸಿಡಾರ್ ಕಾರು:8197/1998-99, ದಿನಾಂಕ: 7ನೇ ಆಗಸ್ಟ್ 2004**

**ವಿಷಯ:** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಅಂಬಾಸಿಡಾರ್ ಕಾರ್ ನೋಂದಣಿ ಸಂಖ್ಯೆ: ಸಿಎಪಿ-8197 ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:** 1) ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರ ಪತ್ರದ ಸಂಖ್ಯೆ: ಹವಸಿ:433/1998-99, ದಿನಾಂಕ: 26.9.1998.

2) ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ: 8.10.1998ರ ಪ್ರಕಟಣೆ ಸಂಯುಕ್ತ ಕರ್ನಾಟಕ ಕನ್ನಡ ದಿನ ಪತ್ರಿಕೆಯಲ್ಲಿ ದಿನಾಂಕ: 2.5.1999 ರಲ್ಲಿ ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 12.11.1998 ರಲ್ಲಿ ಪ್ರಕಟವಾಗಿರುತ್ತದೆ.

**ಪ್ರಕರಣದ ಹಿನ್ನೆಲೆ:**

ಹಣಗೆರೆ ವನ್ಯಜೀವಿ ವಲಯದ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಗಳು ರಿಪ್ಪನ್‌ಪೇಟೆ ಕಡೆ ದಿನಾಂಕ: 25.9.1998 ರಂದು ಇಲಾಖಾ ಜೀಪಿನಲ್ಲಿ ಹೋಗುತ್ತಿದ್ದಾಗ, ಬೆಳಿಗ್ಗೆ ಸುಮಾರು 10.40 ರ ಸಮಯದಲ್ಲಿ ರಿಪ್ಪನ್‌ಪೇಟೆ ಅರಸಾಳು ಮದ್ಯೆ ಸಿದ್ದರಗುಡಿ ಹತ್ತಿರ, ಅಂಬಾಸಿಡಾರ್ ಕಾರೊಂದು ಬರುತ್ತಿದ್ದನ್ನು ಕಂಡು, ಅನುಮಾನಾಸ್ಪದವಾಗಿ ಕಾರಿನ ಚಾಲಕನಿಗೆ ವಾಹನವನ್ನು ನಿಲ್ಲಿಸಲು ಸೂಚಿಸಿದಾಗ, ವಾಹನದ ಚಾಲಕ ವಾಹನವನ್ನು ನಿಲ್ಲಿಸದೇ ವೇಗವಾಗಿ ಹೋಗಿರುತ್ತಾನೆ. ವಾಹನ ನಿಲ್ಲಿಸದ ಕಾರಣಕ್ಕಾಗಿ, ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಗಳು ಇಲಾಖಾ ಜೀಪಿನಲ್ಲಿ ಸದರಿ ವಾಹನವನ್ನು ಬೆನ್ನಟ್ಟಿದ್ದು, ಬೆನ್ನಟ್ಟಿದ ಜಾಗದಿಂದ ಅರ್ಧ ಕಿ.ಮೀ. ಅಂತರದಲ್ಲಿ ಈ ವಾಹನ ಮರಕ್ಕೆ ಡಿಕ್ಕಿಯಾಗಿ ಅಪಘಾತಕ್ಕೀಡಾಗಿರುತ್ತದೆ. ಅಪರಾಧಿಗಳು ಯಾರೂ ಇರಲಿಲ್ಲ. ವಾಹನವನ್ನು ಕೂಲಂಕುಷವಾಗಿ ಪರಿಶೀಲನೆ ಮಾಡಿ ನೋಡಿದಾಗ, ಅದರಲ್ಲಿ ಸುಮಾರು 150 ತುಂಡುಗಳು 122.800 ಕೆ.ಜಿ. ಶ್ರೀಗಂಧ ಇರುವುದನ್ನು ಕಂಡು, ವಾಹನ ಮತ್ತು ಶ್ರೀಗಂಧವನ್ನು ಸರ್ಕಾರಿ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆ ದಾಖಲು ಮಾಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963 ರ ಕಲಂ 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ, ಶ್ರೀಗಂಧದ ತುಂಡು ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963 ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರು ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ತುಂಡುಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ, ತಿಳುವಳಿಕೆ ಪತ್ರವನ್ನು ಕನ್ನಡ ದಿನಪತ್ರಿಕೆಯಾದ, ಸಂಯುಕ್ತ ಕರ್ನಾಟಕದಲ್ಲಿ ದಿನಾಂಕ: 2.5.1999 ರಂದು ಮತ್ತು ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 12.11.1998 ರಲ್ಲಿ ಪ್ರಕಟಿಸಲಾಗಿರುತ್ತದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ಪೂರ್ವ ಇವರು ನೀಡಿದ ಬಿ ಎಕ್ಸ್ಟ್ರಾಕ್ಟ್ ಪ್ರಕಾರ ವಾಹನದ ಮೂಲ ಖರೀದಿದಾರರಿಗೆ, ವಾಹನದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವ ಸಂಬಂಧ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಸೂಕ್ತ ಸಮಜಾಯಿಷಿ ನೀಡಲು ನೋಟೀಸ್ ನೀಡಲಾಗಿರುತ್ತದೆ. ಈ ನೋಟೀಸ್‌ಗೆ ಮೂಲ ಖರೀದಿದಾರರು ಸದರಿ ವಾಹನವನ್ನು ಮಾರಾಟ ಮಾಡಿರುವುದಾಗಿ ತಿಳಿಸುತ್ತಾ, ವಾಹನ ಪಡೆದ ವ್ಯಕ್ತಿಯ ವಿಳಾಸವನ್ನು ನೀಡಿರುತ್ತಾರೆ. ವಿಳಾಸ ನೀಡಿದ ವ್ಯಕ್ತಿಗೆ ನೋಟೀಸ್ ನೀಡಲಾಗಿರುತ್ತದೆ. ಈ ನೋಟೀಸಿಗೆ ಸದರಿಯವರು ಜವಾಬಾಗಲೀ ಅಥವಾ ಖುದ್ದು ಈ ನ್ಯಾಯಾಲಯಕ್ಕೆ ಬಂದು, ಹೇಳಿಕೆಯನ್ನಾಗಲೀ ನೀಡಿರುವುದಿಲ್ಲ. ಸಾಕಷ್ಟು ಕಾಲಾವಕಾಶ ಕೊಟ್ಟರೂ ಸದರಿ ವಾಹನದ ಬಗ್ಗೆ ತಮ್ಮ ಮಾಲೀಕತ್ವವನ್ನು ದೃಢೀಕರಿಸಿ, ವಾಹನವನ್ನು ವಶಕ್ಕೆ ಇದುವರೆಗೆ ಕೋರದೇ ಇರುವುದನ್ನು ನೋಡಿದರೆ, ಈ ವಾಹನ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಂತಹ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲೀಕರು ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ, ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಅಂಬಾಸಿಡಾರ್ ಕಾರ್ ನೋಂದಣಿ ಸಂಖ್ಯೆ: ಸಿಎಪಿ-8197 (ಎಂಜೀನ್ ಸಂಖ್ಯೆ: 6-ED-036744, ಛಾಸ್ಸಿ ಸಂಖ್ಯೆ: 111-589706) ಮತ್ತು 150 ಶ್ರೀಗಂಧದ ತುಂಡುಗಳು 122.800 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಹಾಗೂ ಶ್ರೀಗಂಧದ ತುಂಡುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ನಿಯಮ 441 ರನ್ವಯ ವಸೂಲಾಧಿಕಾರಿ, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4, ಇವರ ನಡವಳಿಕೆಗಳು**

**ವಿಷಯ:** ಶ್ರೀ ಅಬ್ದುಲ್ ಗಫಾರ್ ಬಿನ್ ಲೇಟ್ ಮಹಮದ್ ಹುಸೇನ್, ಸಿ.ಇ.ಪಿ. ನಂ. 12/2002-03 ಇವರ ಸ್ಥಿರಾಸ್ತಿಯ ಮಾರಾಟದ ಸ್ಥಿರೀಕರಣದ ಬಗ್ಗೆ.

**ಉಲ್ಲೇಖ:** ಮಾರಾಟಾಧಿಕಾರಿ, ದೊಡ್ಡಬಳ್ಳಾಪುರ ಶಾಖೆ ಇವರ ಪತ್ರ ಕ್ರ.ಸಂ. ಕೆಆರ್‌ಕೆ ಎಸ್‌ಬಿ/ಡಿಬಿಪಿ/1619/2004-05, ದಿನಾಂಕ: 15.6.2004.

**ಪ್ರಸ್ತಾವನೆ:**

ಶ್ರೀ ಅಬ್ದುಲ್ ಗಫಾರ್ ಬಿನ್ ಮಹಮದ್ ಹುಸೇನ್, ನಂ. 2380, ಡರ್ಗಾ ಮೊಹಲ್ಲಾ, 2ನೇ ವಾರ್ಡ್, ದೊಡ್ಡಬಳ್ಳಾಪುರ ಮತ್ತು ಇತರರು, ಇವರು ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ., ದೊಡ್ಡಬಳ್ಳಾಪುರ ಶಾಖೆಯಿಂದ ಸಾಲ ಪಡೆದು ಸಕಾಲದಲ್ಲಿ ಅಸಲು ಮತ್ತು ಬಡ್ಡಿಯನ್ನು ಮರುಪಾವತಿಸದ ಕಾರಣ ಸದರಿ ಸುಸ್ತಿದಾರರ ಮೇಲೆ ಸಹಕಾರ ಸಂಘಗಳ ಕಾಯ್ದೆಯಡಿ ಸಂಬಂಧಪಟ್ಟ ಅಧಿಕಾರಿಗಳ ನ್ಯಾಯಾಲಯದಲ್ಲಿ ದಾವೆ ಹೂಡಿ ಸುಸ್ತಿಸಾಲ ವಸೂಲಾತಿಗಾಗಿ ಸದರಿಯವರ ವಿರುದ್ಧ ದಿನಾಂಕ: 27.8.2002 ರಂದು ಅವಾರ್ಡ್ ನಂ. ಎ(ಐ.ಎಂ.) ಡಿ-7/1005/2001-02ನ್ನು ಪಡೆದ ನಂತರವೂ ಬಾಕಿದಾರರು ಸಾಲ ಮರುಪಾವತಿ ಮಾಡದ ಕಾರಣ ಡಿಕ್ರಿದಾರ ಬ್ಯಾಂಕ್ ಸದರಿಯವರ ವಿರುದ್ಧ ಸಿ.ಇ.ಪಿ. ನಂ. 12/2002-03 ರಂತೆ ಅಮಲ್ಜಾರಿ ಆದೇಶ ಪಡೆದು ಅಮಲ್ಜಾರಿ ಕಡತವನ್ನು ಮುಂದಿನ ಕ್ರಮಕ್ಕಾಗಿ ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಿಕೊಡಲಾಗಿತ್ತು. ಸದರಿ ಮಾರಾಟಾಧಿಕಾರಿಗಳು ಅಮಲ್ಜಾರಿ ಪ್ರಕರಣದ ವಿಲೇವಾರಿ ಮತ್ತು ಸುಸ್ತಿಸಾಲ ವಸೂಲಾತಿಗಾಗಿ ಸಹಕಾರ ಸಂಘಗಳ ಕಾಯ್ದೆಯಡಿ ಸುಸ್ತಿದಾರರಿಗೆ ಸೇರಿದ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ಅಂತಿಮವಾಗಿ ದಿನಾಂಕ: 13.4.2004 ಶ್ರೀ ಕೆ. ಅಬ್ದುಲ್ ಹಕೀಮ್ ಬಿನ್ ಲೇಟ್ ಎಸ್. ಅಬ್ದುಲ್ ಕರೀಮ್, ನಂ. 2424, 2ನೇ ವಾರ್ಡ್, ದೊಡ್ಡಬಳ್ಳಾಪುರ ಇವರು ಅತಿ ಹೆಚ್ಚಿನ ಮೊತ್ತ ರೂ. 1,40,000/- ಕ್ಕೆ (ಒಂದು ಲಕ್ಷ ನಲವತ್ತು ಸಾವಿರ ರೂಪಾಯಿಗಳು ಮಾತ್ರ) ಬಿಡ್ ಮಾಡಿರುತ್ತಾರೆ. ಮಾರಾಟಾಧಿಕಾರಿಗಳು ಬಿಡ್‌ನ್ನು ಶ್ರೀ ಕೆ. ಅಬ್ದುಲ್ ಹಕೀಮ್ ಬಿನ್ ಲೇಟ್ ಎಸ್. ಅಬ್ದುಲ್ ಕರೀಮ್ ರವರ ಹೆಸರಿಗೆ ಸಲ್ಲಿಸಿ ಮುಂದಿನ ಕ್ರಮಕ್ಕಾಗಿ ಹರಾಜಿನ ದಾಖಲೆಗಳನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಸುಸ್ತಿದಾರರು ಸಹ ಹರಾಜಿನ ದಿನಾಂಕದಿಂದ 30 ದಿನಗಳೊಳಗೆ ಹಣ ಪಾವತಿಸದ ಕಾರಣ ಹಾಗೂ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಕಾರಣಗಳಿಂದಾಗಿ ಮುಂದಿನ ಕಾನೂನು ನಡವಳಿಕೆಗಳನ್ನು ನಡೆಸುವ ಅನಿವಾರ್ಯತೆ ಉಂಟಾಗಿರುತ್ತದೆ. ಮಾರಾಟಾಧಿಕಾರಿ, ದೊಡ್ಡಬಳ್ಳಾಪುರ ಶಾಖೆ ಇವರು ಈ ಕಛೇರಿಗೆ ಸಲ್ಲಿಸಿರುವ ಮಾರಾಟದ ನಡವಳಿಕೆಗಳನ್ನು ಹಾಗೂ ದಾಖಲೆಗಳನ್ನು ಪರಿಶೀಲಿಸಿದಾಗ, ಮಾರಾಟದ ನಡವಳಿಕೆಗಳು ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ರನ್ವಯ ರೂ. 38(2)(ಡಿ) ರ ಪ್ರಕಾರ ಕ್ರಮ ಜರುಗಿಸಿರುವುದು ಕಂಡುಬಂದಿರುತ್ತೆ. ಆದ್ದರಿಂದ ಮುಂದಿನ ಕಾನೂನು ನಡವಳಿಕೆಗಳನ್ನು ನಡೆಸುವ ಅನಿವಾರ್ಯತೆ ಉಂಟಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ ಮಾಡಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಸಹಕಾರ ಸಂಘಗಳ ನಿಯಮ 1960 ನಿಯಮ 38(6)(ಎ) ಅನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ ನಿಯಮ 441, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4, ಆದ ನಾನು ಶ್ರೀ ಅಬ್ದುಲ್ ಗಫಾರ್ ಬಿನ್ ಮಹಮದ್ ಹುಸೇನ್, ನಂ. 2380, ದರ್ಗಾ ಮೊಹಲ್ಲಾ, 2ನೇ ವಾರ್ಡ್, ದೊಡ್ಡಬಳ್ಳಾಪುರ, ಇವರಿಗೆ ಸೇರಿದ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ: 13.4.2004ರ ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬಿಡ್ ಮೊತ್ತ ರೂ. 1,40,000/- (ರೂ. ಒಂದು ಲಕ್ಷ ನಲವತ್ತು ಸಾವಿರ ಮಾತ್ರ) ಕ್ಕೆ ಬಿಡ್ ಮಾಡಿದ್ದ ಶ್ರೀ ಕೆ. ಅಬ್ದುಲ್ ಹಕೀಮ್ ಬಿನ್ ಲೇಟ್ ಎಸ್. ಅಬ್ದುಲ್ ಕರೀಮ್, ನಂ. 2424, 2ನೇ ವಾರ್ಡ್, ದರ್ಗಾ ಮೊಹಲ್ಲಾ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಹೆಸರಿಗೆ ಈ ಕೂಡಲೇ ಜಾರಿಗೆ ಬರುವಂತೆ ಎಲ್ಲಾ ಹಕ್ಕು ಸ್ವಾಮ್ಯ ಪತ್ರಗಳನ್ನು ವರ್ಗಾವಣೆ ಮಾಡಿ ಮಾರಾಟ ಸ್ಥಿರೀಕರಣದ ಆದೇಶವನ್ನು ನೀಡಿರುತ್ತೇನೆ.

**ಷೆಡ್ಯೂಲ್ ಸ್ಥಿರಾಸ್ತಿಯ ವಿವರ**

ನಂ. 2380, ಖಾತಾ ನಂ. 1741/1, 2ನೇ ವಾರ್ಡ್, ದರ್ಗಾ ಮೊಹಲ್ಲಾ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ

| | | |
|---|---|---|
| ವಿಸ್ತೀರ್ಣ : | ಪೂರ್ವ ಪಶ್ಚಿಮ | : $16^1/_2$ ಅಡಿ |
| | ಉತ್ತರ ದಕ್ಷಿಣ | : 30 ಅಡಿಗಳುಳ್ಳ ವಿಸ್ತೀರ್ಣವುಳ್ಳ ಮಣ್ಣಿನ ಛಾವಣಿಯ ಮನೆ |

**ಚೆಕ್ಕುಬಂದಿ**

| | | |
|---|---|---|
| ಪೂರ್ವಕ್ಕೆ | : | ಅಬ್ದುಲ್ ಖಾದರ್ ರವರ ಸ್ವತ್ತು |
| ಪಶ್ಚಿಮಕ್ಕೆ | : | ನಾನೆ ಸಾಹೇಬ್ ರವರ ಮನೆ |
| ಉತ್ತರಕ್ಕೆ | : | ಮುನಿಸಿಪಲ್ ರಸ್ತೆ |
| ದಕ್ಷಿಣಕ್ಕೆ | : | ಅಬ್ದುಲ್ ರಹೀಂ ರವರ ಮನೆ |

ಮೇಲ್ಕಂಡ ಸ್ಥಿರಾಸ್ತಿಯ ವರ್ಗಾವಣೆಯನ್ನು ಸುಸ್ತಿದಾರರು ಪಾವತಿಸಬೇಕಾಗಿರುವ ಭಾಗಶಃ ಸಾಲ ವಸೂಲಿಗಾಗಿ ವರ್ಗಾವಣೆ ಮಾಡಲಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಮೊಹರಿನೊಂದಿಗೆ ದಿನಾಂಕ; 5.8.2004 ರಂದು ನೀಡಲಾಗಿದೆ.

ಪಿ.ಆರ್. 1276

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ,
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು.

**ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ**

**ನಂ.1, ಆಲಿ ಆಸ್ಕರ್ ರಸ್ತೆ, ಕೇಂದ್ರ ಕಛೇರಿ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಆರ್‌ಸಿಎಸ್/ಎಲ್‌ಕ್ಯೂಡಿ/45/2002-03, ದಿನಾಂಕ: 1ನೇ ಸೆಪ್ಟೆಂಬರ್ 2004**

**ವಿಷಯ:** ಎ.ಡಿ.ಇ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ-1, ಇವರ ಪತ್ರ ಸಂಖ್ಯೆ: ಜೆಆರ್‌ಬಿ-1/ಸಮಾಪನೆ/3/2002-03, ದಿನಾಂಕ: 16.11.2002.

2) ಈ ಕಛೇರಿಯ ಇದೇ ಕ್ರಮಾಂಕದ ನೋಟಿಸ್ ದಿ: 2.8.2004.

**ಪ್ರಸ್ತಾವನೆ:**

ಎ.ಡಿ.ಇ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಎ.ಡಿ.ಇ. ಆವರಣ ಹೊಸತಿಪ್ಪಸಂದ್ರ, ಬೆಂಗಳೂರು ಈ ಸಂಘವು ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರು ನೋಂದಣಿ ಸಂಖ್ಯೆ: 23:4900/93 ದಿನಾಂಕ: 20.7.1982 ರಂದು ನೋಂದಾಯಿಸಲ್ಪಟ್ಟಿರುತ್ತದೆ. ಸಂಘದ ಕಾರ್ಯಕ್ಷೇತ್ರವು ಬೆಂಗಳೂರು ನಗರಸಭೆ ಮತ್ತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಾರ್ಯವ್ಯಾಪ್ತಿಯನ್ನು ಹೊಂದಿರುತ್ತದೆ. ಸದರಿ ಸಂಘವನ್ನು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರನ್ವಯ ಸಮಾಪನೆಗೊಳಿಸಲು ಸಹಕಾರ ಸಂಘಗಳ ಜಂಟಿ ನಿಬಂಧಕರು ಉಲ್ಲೇಖ (1) ರ ಪತ್ರದ ಮೂಲಕ ಸಲ್ಲಿಸಲಾಗಿದ್ದ ಪ್ರಸ್ತಾವೆಯನ್ನು ಪರಿಶೀಲಿಸಿ ಸಂಘವನ್ನು ಸಮಾಪನೆಗೊಳಿಸುವ ಪೂರ್ವದಲ್ಲಿ ಸಂಘದ ಆಡಳಿತ ಮಂಡಳಿ ಸದಸ್ಯರುಗಳಿಗೆ ಉಲ್ಲೇಖ (2) ರಂತೆ ನೋಟೀಸು ಜಾರಿ ಮಾಡಿ ನಿಗದಿ ಅವಧಿಯೊಳಗೆ ಹೇಳಿಕೆಯನ್ನು ನೀಡಲು ತಿಳಿಸಲಾಗಿತ್ತು. ಸದಸ್ಯರುಗಳಿಂದ ಹೇಳಿಕೆ ಪಡೆದಿದ್ದು, ಸಂಘವನ್ನು ನಡೆಸಿಕೊಂಡು ಹೋಗಲು ಆಸಕ್ತಿ ಇರುವುದಿಲ್ಲವೆಂದು ತಿಳಿಸಿ ಸಂಘವನ್ನು ಸಮಾಪನೆಗೊಳಿಸಲು ಕೋರಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೆ.ಹೆಚ್. ಗೋಪಾಲಕೃಷ್ಣೇಗೌಡ, ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72 ರೀತ್ಯಾ ದತ್ತವಾಗಿರುವ ಅಧಿಕಾರದನ್ವಯ ಎ.ಡಿ.ಇ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಈ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಮತ್ತು ಸಹಕಾರ ಸಂಘಗಳ ಕಾಯ್ದೆ ಕಲಂ 73 ರ ಪ್ರಕಾರ ಸಹಕಾರ ಸಂಘಗಳ ಸಹಾಯಕ ನಿಬಂಧಕರು (ಸಮಾಪನೆ ಶಾಖೆ) ಕೇಂದ್ರ ಕಛೇರಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ಆದೇಶ ದಿನಾಂಕದ ಒಂದು ವಾರದೊಳಗಾಗಿ ವಹಿಸಿಕೊಂಡು, ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಮತ್ತು ನಿಯಮ 33 ರಂತೆ ಸಮಾಪನಾಧಿಕಾರಿಯು ಕರ್ತವ್ಯ ನಿರ್ವಹಿಸತಕ್ಕದ್ದು. ಹಾಗೂ ಸಂಘದ ಇತ್ತೀಚಿನ ಲೆಕ್ಕಪರಿಶೋಧನಾ ವರದಿಯ ಆಧಾರದ ಮೇಲೆ ಆದ್ಯತಾ ಪಟ್ಟಿಯನ್ನು ತಯಾರಿಸಿ, ಈ ಕಛೇರಿಯ ಅನುಮೋದನೆ ಪಡೆದು, ಆಸ್ತಿ ಜವಾಬ್ದಾರಿಯನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ಕಛೇರಿಯ ಮೊಹರ್‌ನಿಶಿಯೊಂದಿಗೆ ಈ ದಿನ ದಿನಾಂಕ: 1.9.2004 ರಂದು ನೀಡಲಾಗಿದೆ.

ಪಿ.ಆರ್. 1277 ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು.

**ಆಯುಕ್ತರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ**

**ಸಂಖ್ಯೆ: ಎ10/ದತ್ತಿ ನಿಧಿ/ಬದಲಾವಣೆ/2004-05/2983, ದಿನಾಂಕ: 19ನೇ ಆಗಸ್ಟ್ 2004**

**ವಿಷಯ:** ದಿವಂಗತ ನೀಲಗಂಗಮ್ಮ ಗಂಡ ಬಸಬಗೌಡ ಪೋಲಿಸಪಾಟೀಲ ಸ್ಮಾರಕ ದತ್ತಿ ನಿಧಿಯಲ್ಲಿನ ಬಹುಮಾನ ಹಣ ಬದಲಾವಣೆ ಮಾಡುವ ಕುರಿತು.

**ಉಲ್ಲೇಖ:** 1) ಮುಖ್ಯೋಪಾಧ್ಯಾಯರು ಸರಕಾರಿ ಪೌಢಶಾಲೆ ಕದಡಿ ತಾ: ಗದಗ ಇವರ ಪಸಂ: ಇ1/ದತ್ತಿ/ಪಿಯುಸಿ-1/ಮಾಹಿತಿ/04-05/341/ ದಿನಾಂಕ: 21.7.04.

2) ಮುಖ್ಯೋಪಾಧ್ಯಾಯರು ಸರಕಾರಿ ಪ್ರೌಢಶಾಲೆ ಕದಡಿ ತಾ: ಗದಗ್ ಇವರ ಪಸಂ: ಇ1/ದತ್ತಿ ಬದಲಾವಣೆ/11/03-04, ದಿ: 12.5.03

3) ಈ ಕಛೇರಿ ಪಸಂ: ದಿನಾಂಕ: 2.7.2004.

4) ಶ್ರೀ ರಾಜೇಂದ್ರಗೌಡ ಬ ಪೋಲಿಸಪಾಟೀಲ ಇವರ ಪತ್ರ ದಿ: 12.5.2003.

**ಪ್ರಸ್ತಾವನೆ:**

ಮೇಲ್ಕಾಣಿಸಿದ ವಿಷಯ ಹಾಗೂ ಉಲ್ಲೇಖಗಳಂತೆ, ದಿವಂಗತ ನೀಲಗಂಗಮ್ಮ ಗಂಡ ಬಸಬಗೌಡ ಪೋಲಿಸಪಾಟೀಲ ಸ್ಮಾರಕ ದತ್ತಿ ನಿಧಿಯಲ್ಲಿನ ಬಹುಮಾನ ಹಣವನ್ನು ಸದರಿ ಸಂಸ್ಥೆಯ ಪಿ.ಯು.ಸಿ. ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ವಿದ್ಯಾರ್ಥಿಗಳಿಗೆ ದತ್ತಿ ನಿಧಿಯಿಂದ ಬಂದ ಬಡ್ಡಿ ಹಣ ಪ್ರತಿ ವರ್ಷ ಹಂಚುವ ಕುರಿತು ಸದರಿ ಸಂಸ್ಥೆಯ ಪ್ರಾಚಾರ್ಯರನ್ನು ಆಡಳಿತಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ಆದರೆ ನಿರ್ದೇಶಕರು ಪದವಿ ಪೂರ್ವ ಶಿಕ್ಷಣ ಇಲಾಖೆ ಬೆಂಗಳೂರು ಇವರ ಅಧಿಸೂಚನೆ ಪತ್ರ ಸಂಖ್ಯೆ: ಪಪೂಶಿಇ ಸಿಸಿ ಸಿಬ್ಬಂದಿ ವರ್ಗ-2/2000 ದಿನಾಂಕ: 30.6.2000 ರಂತೆ ವಿದ್ಯಾರ್ಥಿಗಳ ಕೊರತೆಯಿಂದಾಗಿ ಸದರಿ ಕಾಲೇಜು ಸ್ಥಳಾಂತರಗೊಂಡಿರುತ್ತದೆ. ಇದರಿಂದಾಗಿ ಸದರಿ ದತ್ತಿ ನಿಧಿಯಿಂದ ಬಹುಮಾನದ ಹಣ ವಿತರಣೆಯಲ್ಲಿ ತಾಂತ್ರಿಕ ತೊಂದರೆ ಬರುತ್ತಿದ್ದ ಕಾರಣ, ಉಲ್ಲೇಖ (4) ರಂತೆ ದತ್ತಿ ಸ್ಥಾಪಕರಾದ ಶ್ರೀ ರಾಜೇಂದ್ರಗೌಡ ಬ ಪೋಲಿಸಪಾಟೀಲ ಇವರು ಸದರಿ ಸಂಸ್ಥೆಯ ಪ್ರೌಢಶಾಲೆಯಲ್ಲಿಯ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ಬಂದ ವಿದ್ಯಾರ್ಥಿಗೆ ಸದರಿ ಬಹುಮಾನದ ಹಣ ವಿತರಿಸಲು ಒಪ್ಪಿಗೆ ಹಾಗೂ ವಿನಂತಿ ಪತ್ರ ಬರೆದಿರುತ್ತಾರೆ.

ಕಾರಣ ಸದರಿ ದತ್ತಿ ನಿಧಿಯಲ್ಲಿನ ಬಹುಮಾನದ ಹಣ ಪ್ರತಿ ವರ್ಷ ಆ ಶಾಲೆಯ ಎಸ್.ಎಸ್.ಎಲ್.ಸಿ. ಪ್ರಥಮ ಬಂದ ವಿದ್ಯಾರ್ಥಿಗೆ ನೀಡುವಂತೆ ಪರಿಷ್ಕೃತ ಆದೇಶ ಹೊರಡಿಸಿ, ಸದರಿ ದತ್ತಿ ನಿಧಿಯ ಪ್ರಯೋಜನ ಆಗುವಂತೆ ಮಾಡಲು ವಿನಂತಿಸಿದೆ.

ಪಿ.ಆರ್. 1278 ಸಹನಿರ್ದೇಶಕರು (ಆಡಳಿತ) ಆಯುಕ್ತರ ಕಛೇರಿ,
ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ.

## ಮಾನ್ಯ 5ನೇ ಎ.ಸಿ.ಎಂ.ಎಂ. ನ್ಯಾಯಾಲಯದ ದಂಡಾಧಿಕಾರಿಯವರು, ಬೆಂಗಳೂರು ನಗರ

**ವಿಷಯ:** ವಾರಸುದಾರರು ಇಲ್ಲದ ಮಾಲುಗಳನ್ನು ಬಹಿರಂಗ ಹರಾಜು ಮಾಡಿ ವಿಲೇವಾರಿ ಮಾಡುವ ಬಗ್ಗೆ.

ಮೇಲಿನ ವಿಷಯದ ಬಗ್ಗೆ ಕೆ.ಪಿ. ಅಗ್ರಹಾರ ಪೊಲೀಸ್ ಠಾಣೆಯಲ್ಲಿ ಈ ಕೆಳಕಂಡ ವಾಹನಗಳನ್ನು ಅಮಾನತ್ತು ಪಡಿಸಿದ್ದು ಸದರಿ ವಾಹನಗಳ ವಾರಸುದಾರರು ಪತ್ತೆಯಾಗಿರುವುದಿಲ್ಲ, ಸದರಿ ವಾಹನಗಳ ಪತ್ತೆ ಬಗ್ಗೆ ಬೆಂಗಳೂರು ನಗರದ ಎಲ್ಲಾ ಪೊಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿದ್ದು ವಾರಸುದಾರರು ಪತ್ತೆಯಾಗಿರುವುದಿಲ್ಲ. ಆದ್ದರಿಂದ ಸದರಿ ಮಾಲುಗಳನ್ನು ಬಹಿರಂಗವಾಗಿ ಹರಾಜು ಮಾಡಲು ಈ ಪ್ರಕಟಣೆಯನ್ನು ಪ್ರಕಟಿಸಲಾಗಿದೆ.

**ವಶಪಡಿಸಿರುವ ಮಾಲುಗಳ ವಿವರ ಕೆಳಕಂಡಂತೆ ಇರುತ್ತದೆ**

| ಕ್ರ.ಸಂ. | ಸಿ.ಮಿಸ್ ನಂಬರ್ ಮತ್ತು ದಿನಾಂಕ | ಪಿ.ಎಫ್. ನಂಬರ್ | ವಿವರ |
|---|---|---|---|
| 1 | 38/03 15.2.2003 | 20/2003 | ಒಂದು ಯಮಾಹ ಮೋಟಾರ್ ಸೈಕಲ್ ನಂ. ಸಿಕೆಪಿ 8319<br>ಇಂಜಿನ್ ನಂ. ಐಎಲ್ಐ-356645<br>ಚಾಸಿಸ್ ನಂ. 193236 |
| 2 | 101/04 12.3.2004 | 10/2004 | ಒಂದು ಹಳೆಯ ಕೆನೆಟಿಕ್ ಹೊಂಡ ರಿ.ನಂ. ಇಲ್ಲ<br>ಇಂಜಿನ್ ನಂ. 104420-NIE-E |
| 3 | 102/04 12.3.2004 | 11/2004 | ಒಂದು ಹಳೆಯ ಯಮಾಹ ಮೋಟಾರ್ ಸೈಕಲ್ ನಂ.<br>ಸಿ.ಕೆ.ಎಂ. 1489, ಇಂಜಿನ್ ನಂ. ಐಎಲ್-1030751<br>ಚಾಸಿಸ್ ನಂ. ಐಎಲ್-1030751 |
| 4 | 107/04 12.3.2004 | 12/2004 | ಒಂದು ಹಳೆಯ ಲೂನ ನಂ. ಕೆಎ 05-ಇ 9895 |

ಪಿ.ಆರ್. 1279 5ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು
## ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ನಡವಳಿಕೆಗಳು
## ಕ್ರ.ಸಂ. ಎಆರ್31/ಎಬಿಎನ್/ದಾವಾ/46/2004-05, ದಿನಾಂಕ: 31ನೇ ಆಗಸ್ಟ್ 2004

**ವಿಷಯ:** ಶ್ರೀ ಕನ್ನಿಕಾಪರಮೇಶ್ವರಿ ಕೋ-ಆಪ್. ಬ್ಯಾಂಕ್ ಲಿ., ದಾವಣಗೆರೆ ಇದರ ತೀರ್ಪು ಬಾಕಿದಾರರಾದ ಶ್ರೀಮತಿ ಸುಬ್ಬಮ್ಮ ಮತ್ತು ಶ್ರೀ ಎನ್.ವೈ. ಕಾಂತ ಶೆಟ್ಟಿ, ಭಗತ್‌ಸಿಂಗ್ ನಗರ, ದಾವಣಗೆರೆ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ಬ್ಯಾಂಕಿನ ಹೆಸರಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 101ಬಿ ಅಡಿಯಲ್ಲಿ ವರ್ಗಾಯಿಸುವ ಬಗ್ಗೆ.

**ಉಲ್ಲೇಖ:**
1) ದಾವಾ ಸಂಖ್ಯೆ 1346/2002-03, ದಿನಾಂಕ: 13.2.2003
2) ಅಮಲ್ಜಾರಿ ಪ್ರಕರಣ ಸಂಖ್ಯೆ: 34/2003-04
3) ಮಾರಾಟಾಧಿಕಾರಿಗಳ ಪತ್ರ ಸಂಖ್ಯೆ: ಎಸ್‌ಜೆ/ಇಪಿ/34/2003-04, ದಿನಾಂಕ: 4.6.2004.
4) ಬ್ಯಾಂಕಿನ ಆಡಳಿತ ಮಂಡಳಿ ಸಭೆಯ ತೀರ್ಮಾನ.

**ಪ್ರಸ್ತಾವನೆ:**

ಶ್ರೀ ಕನ್ನಿಕಾಪರಮೇಶ್ವರಿ ಕೋ-ಆಪ್. ಬ್ಯಾಂಕ್ ಲಿ., ದಾವಣಗೆರೆ ಇದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರಡಿಯಲ್ಲಿ ನೋಂದಣಿಯಾಗಿರುತ್ತದೆ. ಈ ಬ್ಯಾಂಕಿನ ಸಾಲಗಾರರಾದ ಶ್ರೀಮತಿ ಸುಬ್ಬಮ್ಮ ಮತ್ತು ಶ್ರೀ ಎನ್.ವೈ. ಕಾಂತ ಶೆಟ್ಟಿ, ದಾವಣಗೆರೆ ಇವರು ದಾವಣಗೆರೆ ಸಿಟಿ, ಭಗತ್‌ಸಿಂಗ್ ನಗರ, ನಿಟುವಳ್ಳಿ ರಸ್ತೆಯ 4ನೇ ಕ್ರಾಸ್‌ನಲ್ಲಿ ಮೂರು ಅಂತಸ್ತಿನ ವಾಸದ ಮನೆಯ ಡೋರ್ ನಂ. 684/11, ಸೈಟ್ ನಂ. 59ರ ಸೊತ್ತು ಅಳತೆ ಪೂ.ಪ. 35 ಅಡಿ, ಉ.ದ. 25 ಅಡಿಯ ಮನೆಯನ್ನು ಆಧಾರ ಮಾಡಿ ಸಾಲವನ್ನು ಪಡೆದಿರುತ್ತಾರೆ. ಸದರಿ ಸಾಲವನ್ನು ನಿಗದಿತ ಅವಧಿಯೊಳಗೆ ಮರುಪಾವತಿಸದೇ ಸುಸ್ತಿದಾರರಾಗಿರುತ್ತಾರೆ. ಬ್ಯಾಂಕಿನವರು ಸದರಿ ಸಾಲದ ವಸೂಲಾತಿಗಾಗಿ ಸದರಿಯವರ ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಿರುತ್ತಾರೆ. ದಾವಾ ಸಂಖ್ಯೆ: 1346/2002-03 ದಿನಾಂಕ: 13.2.2003 ರಂದು ಒಟ್ಟು ರೂ. 3,14,734.00 ಗಳ ಮೊತ್ತವು ಸದರಿಯವರಿಂದ ವಸೂಲಾತಿಗಾಗಿ ಡಿಕ್ರಿ ಆಗಿರುತ್ತದೆ. ಸದರಿ ಡಿಕ್ರಿಯ ಆಧಾರದ ಮೇಲೆ ಅಮಲ್ಜಾರಿ ಪ್ರಕರಣ ಸಂಖ್ಯೆ 34/2003-04 ನ್ನು ಕಲಂ 101

ರಡಿಯಲ್ಲಿ ದಾಖಲಿಸಿ ತೀರ್ಪುದಾರರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಿ ಬ್ಯಾಂಕಿಗೆ ಬರಬೇಕಾದ ಸಾಲವನ್ನು ವಸೂಲಿ ಮಾಡಿಕೊಳ್ಳಲು ಕ್ರಮ ಕೈಗೊಂಡಿರುತ್ತಾರೆ. ಅಮಲ್ಜಾರಿ ಆದೇಶದ ಮೇರೆಗೆ ಮಾರಾಟಾಧಿಕಾರಿಗಳು ದಿನಾಂಕ: 30.7.2003, 5.8.2003 ಮತ್ತು 26.3.2004 ಗಳಂದು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಲು ಹರಾಜನ್ನು ನಡೆಸಿರುತ್ತಾರೆ. ಹರಾಜಿನಲ್ಲಿ ಯಾವ ಬಿಡ್ಡುದಾರರು ಭಾಗವಹಿಸಿರುವುದಿಲ್ಲ. ಆದ ಕಾರಣ, ಈ ಆಸ್ತಿಯ ಮಾರಾಟವಾಗಿರುವುದಿಲ್ಲ.

ಬಹಿರಂಗ ಹರಾಜಿನಲ್ಲಿ ಯಾವ ಬಿಡ್ಡುದಾರರು ಭಾಗವಹಿಸಿರುವುದಿಲ್ಲ ಪ್ರಯುಕ್ತ ಸದರಿ ಆಸ್ತಿಯನ್ನು ಸಹಕಾರ ಸಂಘಗಳ ಕಾಯಿದೆ ನಿಯಮ 38(2)ರ ಪ್ರಕಾರ ಮಾರಾಟವಾಗದ ಆಸ್ತಿ ಎಂದು ತೀರ್ಮಾನಿಸಿ, ಬ್ಯಾಂಕಿನ ಕಾರ್ಯಕಾರಿ ಮಂಡಳಿಯ ತೀರ್ಮಾನದಂತೆ ಸಹಕಾರ ಸಂಘಗಳ ಕಾಯ್ದೆ ಕಲಂ 101ಬಿ ಪ್ರಕಾರ ಈ ಕೆಳಕಂಡ ಆಸ್ತಿಯನ್ನು ಬ್ಯಾಂಕಿನ ಹೆಸರಿಗೆ ರೂ. 3,67,522.00 ಗಳಿಗೆ ವರ್ಗಾಯಿಸಲು ತೀರ್ಮಾನಿಸಿ, ಮಾರಾಟಾಧಿಕಾರಿಗಳು ಹರಾಜು ನಡವಳಿಕೆಯಲ್ಲಿ ದಾಖಲಿಸಿ ಬ್ಯಾಂಕಿನ ಹೆಸರಿಗೆ ಸ್ಥಿರಾಸ್ತಿಯನ್ನು ವರ್ಗಾಯಿಸಿಕೊಡಬೇಕೆಂದು ನಡವಳಿಕೆಯನ್ನು ಮಾಡಿ ಈ ಕಛೇರಿಗೆ ಪೂರ್ಣ ದಾಖಲಾತಿಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದನ್ನು ಪರಿಗಣಿಸಿ, ಈ ಬಗ್ಗೆ ಕಾಯ್ದೆ ಅನುಸಾರ ಕ್ರಮ ಕೈಗೊಳ್ಳಬೇಕಾಗಿರುವುದನ್ನು ಮನಗೊಂಡಿರುತ್ತದೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಪಾಲ್ಗೊಳ್ಳದೇ ಇರುವ ಪ್ರಯುಕ್ತ ಹಾಗೂ ಬ್ಯಾಂಕು ಈ ಸ್ಥಿರಾಸ್ತಿಯನ್ನು ಸಾಲದ ಬಾಕಿ ಮೊತ್ತಕ್ಕೆ ವರ್ಗಾವಣೆ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿರುವ ಪ್ರಕಾರ ಹಾಗೂ ಮಾರಾಟಾಧಿಕಾರಿಗಳು ಸಲ್ಲಿಸಿದ ಪ್ರಸ್ತಾವನೆಯನ್ನು ಪುರಸ್ಕರಿಸಿ ತೀರ್ಪು ಬಾಕಿದಾರರು ಈ ಕೆಳಕಂಡ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 101 ರಡಿಯಲ್ಲಿ ಬ್ಯಾಂಕಿನ ಹೆಸರಿಗೆ ವರ್ಗಾಯಿಸಲು ಈ ಕೆಳಕಂಡಂತೆ ಆದೇಶ ಮಾಡಿದೆ.

## ಆದೇಶ

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101ಬಿ ಹಾಗೂ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38ಎ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: CMW/509/CLM/96 ದಿನಾಂಕ: 21.3.1997 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಡಿ. ಪಾಂಡುರಂಗಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಹಾಗೂ ವಸೂಲಾಧಿಕಾರಿ ಆದ ನಾನು ಶ್ರೀ ಕನ್ನಿಕಾಪರಮೇಶ್ವರಿ ಕೋ-ಆಪ್. ಬ್ಯಾಂಕ್ ಲಿ., ದಾವಣಗೆರೆ ಇದರ ದಾವಾ ಸಂಖ್ಯೆ: 1346/2002-03 ದಿನಾಂಕ: 13.2.2003 ಮತ್ತು ಅಮಲ್ಜಾರಿ ಪ್ರಕರಣ ಸಂಖ್ಯೆ: 34/2003-04ರ ಪ್ರಕಾರ ತೀರ್ಪು ಬಾಕಿದಾರರಾಗಿರುವ ಶ್ರೀಮತಿ ಸುಬ್ಬಮ್ಮ ಮತ್ತು ಶ್ರೀ ಎನ್.ವೈ. ಕಾಂತ ಶೆಟ್ಟಿ, ಭಗತ್‌ಸಿಂಗ್ ನಗರ, ದಾವಣಗೆರೆ ಇವರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯಾದ ದಾವಣಗೆರೆ ಸಿಟಿ ಭಗತ್‌ಸಿಂಗ್ ನಗರ, ನಿಟುವಳ್ಳಿ ರಸ್ತೆ 4ನೇ ಕ್ರಾಸ್‌ನಲ್ಲಿ ಮೂರು ಅಂತಸ್ತಿನ ವಾಸದ ಮನೆಯ ಡೋರ್ ನಂ. 684/11, ಸೈಟ್ ನಂ. 59ರ ಸೊತ್ತು ಅಳತೆ ಪೂ.ಪ. 35 ಅಡಿ, ಉ.ದ. 25 ಅಡಿಯ ಮನೆಯನ್ನು ರೂ. 3,67,522.00 (ಮೂರು ಲಕ್ಷ ಅರವತ್ತೇಳು ಸಾವಿರದ ಐದು ನೂರ ಇಪ್ಪತ್ತೆರಡು ರೂಪಾಯಿಗಳು) ಮೌಲ್ಯಕ್ಕೆ ಸದರಿಯವರ ಸಾಲದ ತೀರುವಳಿಗಾಗಿ ಸದರಿ ಬ್ಯಾಂಕಿಗೆ ವರ್ಗಾವಣೆ ಮಾಡಲು ಈ ಮೂಲಕ ಆದೇಶಿಸಿರುತ್ತೇನೆ.

ಈ ಸ್ಥಿರ ಸೊತ್ತಿನ ವರ್ಗಾವಣೆ ಪತ್ರವನ್ನು ಸಹಕಾರ ಕಾಯ್ದೆಯನುಸಾರ ನಮೂನೆ-8 ರಲ್ಲಿ ಪ್ರತ್ಯೇಕವಾಗಿ ಲಗತ್ತಿಸಿದೆ. ಮೇಲ್ಕಾಣಿಸಿದ ಸ್ಥಿರಾಸ್ತಿಯನ್ನು ಬ್ಯಾಂಕು ತನ್ನ ಹೆಸರಿಗೆ ವರ್ಗಾಯಿಸಿಕೊಂಡು ತೀರ್ಪು ಬಾಕಿದಾರರಿಂದ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಯನ್ನು ತೀರುವಳಿ ಮಾಡಿಕೊಳ್ಳಲು ನಿರ್ದೇಶಿಸಿದೆ ಹಾಗೂ ಪ್ರತಿವಾದಿಯಿಂದ ಈ ಸ್ಥಿರ ಸೊತ್ತಿನ ವರ್ಗಾವಣೆಯಿಂದ ಪೂರ್ಣ ಮೊತ್ತ (ಸಾಲ) ವಸೂಲಿಯಾಗದಿದ್ದಲ್ಲಿ ಪ್ರತಿವಾದಿಯ ಇನ್ನಿತರ ಚರ-ಸ್ಥಿರಾಸ್ತಿಗಳನ್ನು ಜಪ್ತಿ ಬಹಿರಂಗ ಹರಾಜು ಮೂಲಕ ಬಾಕಿ ಮೊತ್ತವನ್ನು ವಸೂಲಿ ಮಾಡಿಕೊಳ್ಳತಕ್ಕದ್ದೆಂದು ಆದೇಶ ಮಾಡಿದೆ.

## ಆಸ್ತಿಯ ವಿವರ

ದಾವಣಗೆರೆ ನಗರದ ಭಗತ್‌ಸಿಂಗ್ ನಗರದಲ್ಲಿರುವ ನಿಟುವಳ್ಳಿ ರಸ್ತೆ, 4ನೇ ಕ್ರಾಸ್‌ನಲ್ಲಿರುವ ಮೂರು ಅಂತಸ್ತಿನ ವಾಸದ ಮನೆ ನಂ. 684/11, ಸೈಟ್ ನಂ. 59, ಅಳತೆ: ಪೂ.ಪ. 35 ಅಡಿ, ಉ.ದ. 25 ಅಡಿ, ಇದರ ಚಕ್ಕುಬಂದಿ ಪೂರ್ವಕ್ಕೆ - ಸೈಟ್ ನಂ. 51, ಪಶ್ಚಿಮಕ್ಕೆ - 25 ಅಡಿ ರಸ್ತೆ, ಉತ್ತರಕ್ಕೆ - ಸೈಟ್ ನಂ. 58, ದಕ್ಷಿಣಕ್ಕೆ - ಸೈಟ್ ನಂ. 60.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 31.8.2004 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದಾವಣಗೆರೆ ಉಪವಿಭಾಗ, ದಾವಣಗೆರೆ.

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳ ಕಛೇರಿ, ದಾವಣಗೆರೆ ಉಪವಿಭಾಗ, ದಾವಣಗೆರೆ

## ನಮೂನೆ - 8

(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ ಇದರ ರೀತ್ಯ)

ಶ್ರೀ ಕನ್ನಿಕಾಪರಮೇಶ್ವರಿ ಕೋ-ಆಪ್. ಬ್ಯಾಂಕ್ ಲಿ., ದಾವಣಗೆರೆ ಇದರ ಕಾರ್ಯದರ್ಶಿಯವರು, ಶ್ರೀಮತಿ ಸುಬ್ಬಮ್ಮ ಮತ್ತು ಶ್ರೀ ಎನ್.ವೈ. ಕಾಂತ ಶೆಟ್ಟಿ, ದಾವಣಗೆರೆ, ಇವರಿಂದ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಗಳ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ದಾವಾ ಸಂಖ್ಯೆ: 1346/2002-03 ರಲ್ಲಿ ಸದರಿಯವರಿಂದ ಬ್ಯಾಂಕಿಗೆ ಆಧಾರ ಮಾಡಿರುವ ಈ ಸರ್ಟಿಫಿಕೇಟ್‌ನ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ವಸೂಲಿ ಮಾಡಿಕೊಳ್ಳಲು ಅವಾರ್ಡನ್ನು ಪಡೆದಿದ್ದು ಇದನ್ನು ಜಾರಿಗೊಳಿಸಲು ಕಲಂ 101 ರಡಿಯಲ್ಲಿ ಪಡೆಯಲಾದ ಅಮಲ್ಜಾರಿ ಪ್ರಕರಣದಲ್ಲಿ ದಿನಾಂಕ: 30.7.2003, 5.8.2003 ಮತ್ತು 26.3.2004 ಗಳಂದು ಸ್ಥಿರಾಸ್ತಿಯ ಬಹಿರಂಗ ಹರಾಜನ್ನು ಇಟ್ಟಿದ್ದು, ಈ ಎಲ್ಲಾ ದಿನಗಳಂದು ನಡೆಸಲಾದ ಹರಾಜಿನಲ್ಲಿ

ಕೊಂಡುಕೊಳ್ಳುವವರು ಇಲ್ಲದ್ದರಿಂದ ಸದರಿ ಸೊತ್ತನ್ನು ಮಾರಾಟ ಮಾಡಲಾಗಲಿಲ್ಲವೆಂದು ಸಕ್ಷಮ ಅಧಿಕಾರಿಯಾದ ನಾನು ಮನವರಿಕೆ ಮಾಡಿಕೊಂಡಿರುತ್ತೇನೆ.

ದಾವಾ ಸಂಖ್ಯೆ: 1346/2002-03 ರಡಿಯಲ್ಲಿ ಪಡೆಯಲಾದ ಡಿಕ್ರಿ ಆದೇಶದ ಪ್ರಕಾರ ಬ್ಯಾಂಕಿಗೆ ಆಧಾರ ಮಾಡಲಾಗಿರುವ ತೀರ್ಪು ಬಾಕಿದಾರರ ಸ್ಥಿರಾಸ್ತಿಯ ಮೇಲೆ ಬ್ಯಾಂಕು ಹಕ್ಕನ್ನು ಹೊಂದಿರುವುದನ್ನು ಪರಿಗಣಿಸಿ, ಬಹಿರಂಗ ಹರಾಜುಗಳಲ್ಲಿ ಈ ಸ್ಥಿರಾಸ್ತಿಯು ಮಾರಾಟವಾಗಿಲ್ಲವೆಂದು ಮನವರಿಕೆ ಮಾಡಿಕೊಂಡು ಸಾಲದ ಬಾಕಿ ರೂ. 3,67,522.00 (ಮೂರು ಲಕ್ಷ ಅರವತ್ತೇಳು ಸಾವಿರದ ಐದು ನೂರ ಇಪ್ಪತ್ತೆರಡು ರೂಪಾಯಿಗಳು) ಮೊತ್ತಕ್ಕೆ ಬ್ಯಾಂಕಿನ ಸಾಲದ ತೀರುವಳಿಗಾಗಿ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಶ್ರೀ ಕನ್ನಿಕಾಪರಮೇಶ್ವರಿ ಕೋ-ಆಪ್. ಬ್ಯಾಂಕ್ ಲಿ., ದಾವಣಗೆರೆ ಇದರ ಹೆಸರಿಗೆ ಅನುಬಂಧದಲ್ಲಿ ಕಾಣಿಸಲಾಗಿರುವ ಷರತ್ತುಗಳ ಮೇರೆಗೆ ವರ್ಗಾವಣೆ ಮಾಡಿರುತ್ತೇನೆ ಮತ್ತು ತತ್ಸಂಬಂಧವಾಗಿ ಆದೇಶವನ್ನು ಮಾಡಿರುತ್ತೇನೆ.

**ಷೆಡ್ಯೂಲ್**

| ಸ್ಥಳ | ಸ್ಥಿರಾಸ್ತಿ ವಿವರ | ಅಳತೆ | ಸಾಲ ತೆಗೆದು ಕೊಂಡಿರುವ ಸಾಮ್ಯ ಹಕ್ಕುಭಾದ್ಯತೆ | ಮಾರುಕಟ್ಟೆ ಮೌಲ್ಯ | ಸೊತ್ತು ಒಳಪಟ್ಟಿರುವ ಸಾಲದ ವಿವರಗಳು |
|---|---|---|---|---|---|
| ದಾವಣಗೆರೆ | ದಾವಣಗೆರೆ ನಗರದ ಭಗತ್‌ಸಿಂಗ್ ನಗರದಲ್ಲಿರುವ ನಿಟುವಳ್ಳಿ ರಸ್ತೆ, 4ನೇ ಕ್ರಾಸ್ ನಲ್ಲಿರುವ ಮೂರು ಅಂತಸ್ತಿನ ವಾಸದ ಮನೆ ನಂ. 684/11, ಸೈಟ್ ನಂ. 59 | ಪೂ.ಪ. 35 ಅಡಿ ಉ.ದ. 25 ಅಡಿ | ಸ್ವಂತ ಸ್ವಾಧೀನ | ರೂ.10.00 ಲಕ್ಷ | ಅಸಲು ಬಡ್ಡಿ ಮತ್ತು ಇತರೆ ಖರ್ಚುಗಳು ಸೇರಿ ಒಟ್ಟು ರೂ. 3,67,522.00 ದಿ: 31.3.2004 ಕ್ಕೆ ಇದ್ದಂತೆ |

**ಮೇಲ್ಕಂಡ ಸ್ಥಿರಾಸ್ತಿಗೆ ಚಕ್ಕುಬಂದಿ ಈ ಕೆಳಕಂಡಂತಿರುತ್ತದೆ**

ಪೂರ್ವಕ್ಕೆ - ಸೈಟ್ ನಂ. 51, ಪಶ್ಚಿಮಕ್ಕೆ - 25 ಅಡಿ ರಸ್ತೆ, ಉತ್ತರಕ್ಕೆ - ಸೈಟ್ ನಂ. 58, ದಕ್ಷಿಣಕ್ಕೆ - ಸೈಟ್ ನಂ. 60

**ಅನುಬಂಧ**

**ಷರತ್ತುಗಳು**

1. ಸ್ಥಿರಾಸ್ತಿಯು ಬ್ಯಾಂಕಿಗೆ ವರ್ಗಾವಣೆ ಮಾಡಿದ ನಂತರ, ನಿಗದಿತ ಅವಧಿಯಲ್ಲಿ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಗಳ ಸಂಬಂಧ ಜಮಾ - ಖರ್ಚುಗಳನ್ನು ಮಾಡಿಕೊಂಡು ಹೆಚ್ಚುವರಿ ಹಣವನ್ನು ಬ್ಯಾಂಕಿಗೆ ಕೊಡಬೇಕಾದ (ಬಾಕಿ) ಸಾಲ ಉಳಿದುಕೊಂಡಲ್ಲಿ ತೀರ್ಪುದಾರರಿಗೆ ತಿಳಿಸತಕ್ಕದ್ದು.
2. ಬ್ಯಾಂಕಿಗೆ ವರ್ಗಾವಣೆಯನ್ನು ಮಾಡಲಾಗಿರುವ ಸ್ಥಿರಾಸ್ತಿಯು ಬ್ಯಾಂಕಿನ ಸ್ವಾಧೀನ, ಹಕ್ಕು ಬಾಧ್ಯತೆಗಳು ಮತ್ತು ನಿರ್ವಹಣೆಗೊಳಪಟ್ಟಿರುತ್ತದೆ.
3. ಬ್ಯಾಂಕು ಸ್ಥಿರಾಸ್ತಿಯನ್ನು ಯೋಗ್ಯ ಬೆಲೆಗೆ ಮಾರಾಟ ಮಾಡತಕ್ಕದ್ದು.
4. ಸ್ಥಿರಾಸ್ತಿಯನ್ನು ಮಾರಾಟ ಮಾಡುವ ಸಂದರ್ಭದಲ್ಲಿ ತೀರ್ಪು ಬಾಕಿದಾರರಿಗೆ ಅಥವಾ ಅವರ ಕುಟುಂಬದ ಸದಸ್ಯರಿಗೆ ಪ್ರಥಮ ಆದ್ಯತೆಯನ್ನು ನೀಡತಕ್ಕದ್ದು.
5. ಸ್ಥಿರಾಸ್ತಿಯು ಮಾರಾಟವಾಗುವವರೆಗೆ ಈ ಆಸ್ತಿಯಿಂದ ಬ್ಯಾಂಕು ವರಮಾನವನ್ನು ಗಳಿಸುವ ರೀತಿಯಲ್ಲಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಇದರ ಕುರಿತು ಸೂಕ್ತ ಲೆಕ್ಕ ಇತ್ಯಾದಿಗಳನ್ನು ಇಡತಕ್ಕದ್ದು.
6. ಈ ಸ್ಥಿರಾಸ್ತಿಯ ನಿರ್ವಹಣೆ ಸಂಬಂಧ ಖರ್ಚುಗಳು ಅಂದರೆ ಕಂದಾಯ, ತೆರಿಗೆ ಇತ್ಯಾದಿಗಳ ಕುರಿತಂತೆ ಬ್ಯಾಂಕು ವಹಿಸಿಕೊಳ್ಳತಕ್ಕದ್ದು ಮತ್ತು ಪ್ರತ್ಯೇಕವಾದ ಲೆಕ್ಕಗಳನ್ನು ಇಡತಕ್ಕದ್ದು.

ಸರ್ಟಿಫಿಕೇಟನ್ನು ದಿನಾಂಕ: 31.8.04 ರಂದು ನನ್ನ ಸ್ವಸಹಿ ಹಾಗೂ ಕಛೇರಿಯ ಮೊಹರು ಸಹಿಯೊಂದಿಗೆ ಕೊಟ್ಟಿರುತ್ತದೆ.

ಪಿ.ಆರ್. 1280

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದಾವಣಗೆರೆ ಉಪವಿಭಾಗ, ದಾವಣಗೆರೆ.

**ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು, ಇವರ ನಡವಳಿಗಳು**

**ಸಂಖ್ಯೆ: ಸಿಬ್ಬಂದಿ/26/ಇಸಿಸಿ/2002-03, ದಿನಾಂಕ: 4ನೇ ಸೆಪ್ಟೆಂಬರ್ 2004**

**ವಿಷಯ:** ಶ್ರೀ ಎಂ. ರಮೇಶ್, ಬೆರಳಚ್ಚುಗಾರರು, ಕೇಂದ್ರ ಕಛೇರಿ, ಬೆಂಗಳೂರು ಇವರ ಅನಧಿಕೃತ ಗೈರುಹಾಜರಿ - ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರನ್ವಯ ಶಿಸ್ತುಕ್ರಮ ಸೇವೆಯಿಂದ ವಜಾಗೊಳಿಸುವ ಕುರಿತು.

**ಉಲ್ಲೇಖ:** 1) ಇದೇ ಸಮಸಂಖ್ಯೆ ದಿ: 6.8.2003 ರ ಆದೇಶ ಮತ್ತು 12.12.2003 ರ ತಿಳುವಳಿಕೆ ಪತ್ರ ಹಾಗೂ ದಿನಾಂಕ: 17.6.2004ರ ಪತ್ರಿಕಾ ಪ್ರಕಟಣೆ

**ಪ್ರಸ್ತಾವನೆ:**

ಶ್ರೀ ಎಂ. ರಮೇಶ್, ಬೆರಳಚ್ಚುಗಾರರು, ಕೇಂದ್ರ ಕಛೇರಿ, ಬೆಂಗಳೂರು ಇವರು ಪದೇ ಪದೇ ಕಛೇರಿ ಕೆಲಸಕ್ಕೆ ಅನಧಿಕೃತ ಗೈರುಹಾಜರಾಗುವ ಪರಿಪಾಠ ಬೆಳೆಸಿಕೊಂಡಿದ್ದು, ಇವರು ಸಕ್ಷಮ ಪ್ರಾಧಿಕಾರದ ಪೂರ್ವ ಮಂಜೂರಾತಿ ಇಲ್ಲದೆ ದಿನಾಂಕ: 16.5.2003

ರಿಂದ ಕಛೇರಿ ಕೆಲಸಕ್ಕೆ ಗೈರು ಹಾಜರಾಗಿ ಉಳಿದು ನಂತರ ದಿ: 16.5.2003 ರಿಂದ 14.6.2003 ರವರೆಗೆ ರಜೆ ಮಂಜೂರು ಮಾಡುವಂತೆ ದಿ: 27.5.2003 ರಲ್ಲಿ ಸಲ್ಲಿಸಿದ ಇವರ ಕೋರಿಕೆಯನ್ನು ಪರಿಗಣಿಸದೆ, ಇವರು ದಿ: 15.6.2003 ರ ನಂತರವೂ ಅನಧಿಕೃತ ಗೈರು ಹಾಜರಾಗಿ ಉಳಿದ ಕಾರಣ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರನ್ವಯ ಇವರ ವಿರುದ್ಧ ಇಲಾಖಾ ವಿಚಾರಣಾ ಕ್ರಮ ಬಾಕಿ ಇಟ್ಟು ಉಲ್ಲೇಖಿತ ದಿ: 6.8.2003 ರಲ್ಲಿ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶಿಸಲಾಗಿತ್ತು. ನೋಂದಣಿ ಅಂಚೆ ಮೂಲಕ ಇವರ ವಾಸದ ವಿಳಾಸಕ್ಕೆ ಕಳುಹಿಸಿದ ಈ ಆದೇಶವನ್ನು ಇವರು ಪಡೆಯದೆ ನಿರಾಕರಿಸಿದ ಕಾರಣ ಪುನಃ ಈ ಆದೇಶವನ್ನು ಸದರಿಯವರಿಗೆ ಮುದ್ದಾಂ ಮೂಲಕ ದಿ: 28.8.2003 ರಂದು ಜಾರಿಗೊಳಿಸಲಾಗಿದೆ.

ಆರೋಪಿ ಸರ್ಕಾರಿ ನೌಕರರು ರಜೆ ಪಡೆಯದೆ 4 (ನಾಲ್ಕು) ತಿಂಗಳಿಗೂ ಮೀರಿ ಕರ್ತವ್ಯದಿಂದ ಗೈರು ಹಾಜರಾಗಿರುವ ಇವರು ಕರ್ನಾಟಕ ಸಿವಿಲ್ ಸೇವಾ ನಿಯಮಗಳು 1958ರ ನಿಯಮ 108ರಡಿ ಸೇವೆಯಿಂದ ವಜಾಗೊಳ್ಳುವುದಕ್ಕೆ ಗುರಿಯಾಗುವುದಾಗಿದ್ದು, ಇದರ ಸಲುವಾಗಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರಲ್ಲಿ ತಿಳಿಸಿದ ಕಾರ್ಯವಿಧಾನವನ್ನು ಅನುಸರಿಸಲು ಅನುಬಂಧ 1 ರಿಂದ 4 ರವರೆಗಿನ ನಿರ್ದಿಷ್ಟ ದೋಷಾರೋಪಗಳ ಪಟ್ಟಿಯೊಂದಿಗೆ ನೋಂದಣಿ ಅಂಚೆ ಮೂಲಕ ಕಳುಹಿಸಿದ ಉಲ್ಲೇಖಿತ ದಿ: 12.12.2003 ರ ತಿಳುವಳಿಕೆ ಪತ್ರವನ್ನು ಆರೋಪಿ ಸರ್ಕಾರಿ ನೌಕರರು ಪಡೆಯದೆ ನಿರಾಕರಿಸಿದ್ದರಿಂದ ಈ ಅಂಚೆ ಲಕೋಟೆ ಕಚೇರಿಗೆ ಹಿಂದಿರುಗಿ ಬಂದಿರುತ್ತದೆ. ಆದ್ದರಿಂದ ದಿ: 12.12.2003 ರ ತಿಳುವಳಿಕೆ ಪತ್ರವನ್ನು ಇವರ ವಾಸದ ವಿಳಾಸದಲ್ಲಿ ಇವರಿಗೆ ಮುದ್ದಾಂ ಮೂಲಕ ದಿ: 3.1.2004 ರಂದು ಜಾರಿಗೊಳಿಸಲು ಕಳುಹಿಸಲಾಗಿದ್ದು, ಇದೂ ಸಾಧ್ಯವಾಗದೆ ನೋಟೀಸು ವಾಪಸ್ಸು ಬಂದಿರುತ್ತದೆ.

ಈ ಹಿನ್ನೆಲೆಯಲ್ಲಿ ಆರೋಪಿ ಸರ್ಕಾರಿ ನೌಕರರಿಗೆ ಅಂತಿಮ ಅವಕಾಶ ನೀಡುವ ಸಲುವಾಗಿ ಅಧಿಕ ಪ್ರಚಾರವುಳ್ಳ "ಸಂಯುಕ್ತ ಕರ್ನಾಟಕ" ಹಾಗೂ "ವಿಜಯ ಕರ್ನಾಟಕ" ದೈನಂದಿನ ಕನ್ನಡ ಸುದ್ದಿ ಪತ್ರಿಕೆಗಳಲ್ಲಿ ದಿ: 17.6.2004 ರಂದು "ಪ್ರಕಟಣೆ" ನೀಡಿ ಈ ದಿನಾಂಕದಿಂದ 15 (ಹದಿನೈದು) ದಿನಗಳೊಳಗಾಗಿ ಕರ್ತವ್ಯಕ್ಕೆ ಹಾಜರಾಗುವಂತೆ ಅಲ್ಲದೆ ಶಿಸ್ತು ನಡವಳಿಗಳ ಸಂಬಂಧ ಈ ಪ್ರಾಧಿಕಾರದ ಮುಂದೆ ಖುದ್ದು ಹಾಜರಾಗುವಂತೆ ತಿಳಿಸಲಾಗಿತ್ತು. ಆದರೆ ಈ ಪತ್ರಿಕಾ ಪ್ರಕಟಣೆಯ ನಂತರ ಸೂಚಿತ ಅವಧಿಯೊಳಗಾಗಲೀ ಅಥವಾ ಈ ದಿನಾಂಕದವರೆಗಾಗಲೀ ಆರೋಪಿ ಸರ್ಕಾರಿ ನೌಕರರು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವುದಿಲ್ಲ ಅಥವಾ ಶಿಸ್ತು ನಡವಳಿಗಳನ್ನು ಎದುರಿಸಲು ಹಾಜರಾಗಿರುವುದಿಲ್ಲ.

ಆರೋಪಿ ಸರ್ಕಾರಿ ನೌಕರರು ಕಚೇರಿ ಕೆಲಸಕ್ಕೆ ದೀರ್ಘಕಾಲದಿಂದ ಅನಧಿಕೃತ ಗೈರು ಹಾಜರಿಯಲ್ಲಿ ಉಳಿದಿದ್ದು, ಇವರ ವಿರುದ್ಧ ಪ್ರಸ್ತಾಪಿಸಿದ ಶಿಸ್ತು ನಡವಳಿಗಳಲ್ಲಿ ಇವರು ಭಾಗವಹಿಸದಿರುವುದನ್ನು, ಅಂತೆಯೇ ಇವರ ಜೊತೆ ಸಂಪರ್ಕ ನಡೆಸಲು ಸಾಧ್ಯವಿಲ್ಲವೆಂಬುದನ್ನು ಮನಗಂಡು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರನ್ವಯ ಗೊತ್ತುಪಡಿಸಿದ ವಿಧಾನವನ್ನು ಅನುಸರಿಸುವುದು ಕಾರ್ಯಸಾಧ್ಯವಿಲ್ಲವೆಂದು ನಿಯಮ 14(ii) ರಡಿ ದಾಖಲಿಸಿ, ಇವರನ್ನು ಸೇವೆಯಿಂದ ವಜಾಗೊಳಿಸಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಆದೇಶ**

ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 9(2)(ಬಿ.ಬಿ) ಅಡಿ ಪ್ರದತ್ತವಾದ ಅಧಿಕಾರದನ್ವಯ ಕೆ.ಹೆಚ್. ಗೋಪಾಲಕೃಷ್ಣೇಗೌಡ, ಭಾ.ಆ.ಸೇ. ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಆದ ನಾನು ಶ್ರೀ ಎಂ. ರಮೇಶ್, ಬೆರಳಚ್ಚುಗಾರರು, ಕೇಂದ್ರ ಕಛೇರಿ, ಬೆಂಗಳೂರು ಇವರಿಗೆ ಕರ್ನಾಟಕ ಸರ್ಕಾರಿ ಸೇವಾ ನಿಯಮಗಳು 1958ರ ನಿಯಮ 108ನ್ನು ಓದಿಕೊಂಡಂತೆ, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 8(VIII) ಈ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದ್ದೇನೆ.

ಪಿ.ಆರ್. 1281 **ಕೆ.ಹೆಚ್. ಗೋಪಾಲಕೃಷ್ಣೇಗೌಡ**

ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು.

**ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ. 1, ಆಲಿ ಆಸ್ಕರ್ ರಸ್ತೆ, ಬೆಂಗಳೂರು-52, ಇವರ ನಡವಳಿಗಳು**

**ಸಂಖ್ಯೆ: ಆರ್‌ಸಿಎಸ್/ಎಲ್‌ಕ್ಯೂಡಿ/09/2004-05, ದಿನಾಂಕ: 4ನೇ ಸೆಪ್ಟೆಂಬರ್ 2004**

**ವಿಷಯ:** ದಿ ಜೆಮ್ ವಾಯರ್ ಉತ್ಪಾದಕರ ಸಹಕಾರ ಸಂಘ ನಿ., ಧಾರವಾಡ ಇದನ್ನು ಸಮಾಪನೆಗೊಳಿಸುವ ಕುರಿತು.

**ಉಲ್ಲೇಖ:** 1) ಸಹಕಾರ ಸಂಘಗಳ ಜಂಟಿ ನಿಂಬಂಧಕರು, ಬೆಳಗಾಂ ಪ್ರಾಂತ, ಬೆಳಗಾಂ, ಇವರ ಪತ್ರ ಸಂ. ಜೆಆರ್‌ಎಲ್/ಎ/64/ಎಲ್‌ಕ್ಯೂಡಿ/2004-05, ದಿನಾಂಕ: 6.8.2004.

2) ಸಹಕಾರ ಸಂಘಗಳ ಉಪನಿಬಂಧಕರು, ಧಾರವಾಡ ಇವರ ಪತ್ರ ಸಂ. ಡಿಆರ್‌ಜಡ್/ಎಲ್‌ಕ್ಯೂಡಿ/ಸಿಆರ್-10/2004-05, ದಿನಾಂಕ: 8.7.2004.

**ಪ್ರಸ್ತಾವನೆ:**

ದಿ ಜೆಮ್ ವಾಯರ್ ಉತ್ಪಾದಕರ ಸಹಕಾರ ಸಂಘ ನಿ., ಧಾರವಾಡ ಇದರ ಕಾರ್ಯಕ್ಷೇತ್ರವು ಧಾರವಾಡ, ಬೆಳಗಾವಿ ಹಾಗೂ ಕಾರವಾರ ಜಿಲ್ಲೆಯ ಹಳಿಯಾಳ ತಾಲ್ಲೂಕಿಗೆ ಸೀಮಿತವಾಗಿರುತ್ತದೆ. ಸದರಿ ಸಂಘದ ಆಡಳಿತ ಮಂಡಳಿ ರದ್ದುಪಡಿಸಿ ಸಹಕಾರ ಸಂಘಗಳ ಉಪನಿಬಂಧಕರು, ಧಾರವಾಡ ಇವರನ್ನು ವಿಶೇಷಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಶೇಷಾಧಿಕಾರಿಯ ಅವಧಿಯಲ್ಲಿಯೂ ಸಹಿತ ಸದರಿ ಸಂಘದ ಕಾರ್ಯಚಟುವಟಿಕೆಗಳನ್ನು ಕೈಗೊಳ್ಳಲು ಸಾಧ್ಯವಾಗದೇ ಸಂಘವು ಸ್ಥಗಿತಗೊಂಡಿದೆ ಎಂದು ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾಂ ಪ್ರಾಂತ ಹಾಗೂ ಸಹಕಾರ ಸಂಘಗಳ ಉಪನಿಬಂಧಕರು, ಧಾರವಾಡ ಇವರು ಕ್ರಮವಾಗಿ ಉಲ್ಲೇಖ (1) ಮತ್ತು

(2)ರ ಪತ್ರದಲ್ಲಿ ತಿಳಿಸಿರುತ್ತಾರೆ ಹಾಗೂ ಸಂಘವು ನಿಷ್ಕ್ರಿಯತೆಯಲ್ಲಿ ಹಾಗೆಯೇ ಮುಂದುವರೆಸಿಕೊಂಡು ಹೋಗುವುದು ಸೂಕ್ತವಾಗದೇ ಇರುವುದರಿಂದ ಸದರಿ ಸಂಘವನ್ನು ಈ ಕೆಳಗೆ ಕಾಣಿಸಿದ ಕಾರಣಗಳಿಂದ ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟಿರುತ್ತಾರೆ.

1. ಸಂಘದ ಲೆಕ್ಕಪರಿಶೋಧನೆ 2001-02ನೇ ಸಾಲಿನಲ್ಲಿ ಲೆಕ್ಕ ಪರಿಶೋಧಕರು ಅನೇಕ ನ್ಯೂನತೆಗಳ ಮೇಲೆ ಕ್ರಮ ಕೈಗೊಳ್ಳಲು ಸೂಚಿಸಿದ್ದರೂ ಇಲ್ಲಿಯವರೆಗೆ ಕ್ರಮ ಕೈಗೊಂಡಿರುವುದಿಲ್ಲ. ಹಾಗೂ ನಡೆದ ಅವ್ಯವಹಾರಗಳನ್ನು ಸರಿಪಡಿಸಿದ ಬಗ್ಗೆ ಏನು ಕ್ರಮ ಕೈಗೊಂಡು ನ್ಯೂನತೆ ಸರಿಪಡಿಸಿರುವುದಿಲ್ಲ.
2. ಸಂಘದ ಉಪ ನಿಯಮಗಳಲ್ಲಿ ಮಿತ ಸದಸ್ಯರು ಚುನಾವಣೆಯಲ್ಲಿ ಪಾಲ್ಗೊಳ್ಳಲು ಅವಕಾಶವಿದ್ದು ಇದರಿಂದ ಸಂಘದ ಅಭಿವೃದ್ಧಿಗೆ ಕಳೆದ ಸುಮಾರು ವರ್ಷಗಳಿಂದ ಅವಕಾಶವಿದ್ದರೂ ಆಡಳಿತ ಮಂಡಳಿ ಪರಿಣಾಮಕಾರಿಯಾದ ಪ್ರಗತಿ ಮಾಡಿರುವುದಿಲ್ಲ.
3. ಸಂಘದಲ್ಲಿ ನೋಂದಣಿಯಾದಾಗಿನಿಂದಲೂ ಇಲ್ಲಿಯವರೆಗೂ 87 ಜನ ಸದಸ್ಯರಿದ್ದು, ಮಧ್ಯದಲ್ಲಿ ಕೆಲವು ಸದಸ್ಯರು ಮರಣ ಹೊಂದಿದ್ದು, ಕೆಲವು ಸದಸ್ಯರ ಷೇರನ್ನು ಮಾರಾಟ ಮಾಡುತ್ತಿರುವುದು ಸಹಕಾರ ಸಂಘಗಳ ಕಾಯ್ದೆ ಕಲಂ 24 ರ ಉಲ್ಲಂಘನೆಯಾಗಿರುತ್ತದೆ.
4. ಹಿಂದಿನಿಂದ ಮುಖ್ಯ ಕಾರ್ಯನಿರ್ವಾಹಕರ ಹುದ್ದೆಯನ್ನು ನೇಮಕ ಮಾಡದೇ ಕೇವಲ ಒಬ್ಬ ನಿರ್ದೇಶಕರು, ವ್ಯವಸ್ಥಾಪಕ ನಿರ್ದೇಶಕರಾಗಿ ಕೆಲಸ ನಿರ್ವಹಿಸುತ್ತಿರುವುದು 29 (ಜಿ) ಉಲ್ಲಂಘನೆಯಾಗಿರುತ್ತದೆ.
5. ಬರತಕ್ಕ ಖಾತೆ ಬಾಕಿಗಳ ಬಗ್ಗೆ ಯಾವುದೇ ಕ್ರಮ ಜರುಗಿಸಿರುವುದಿಲ್ಲ.
6. ಆಡಿಟ್ ವರದಿಯಲ್ಲಿ ನಮೂದಿಸಿದ್ದ ನ್ಯೂನತೆಗಳನ್ನು ಸರಿಪಡಿಸಿಕೊಂಡಿರುವುದಿಲ್ಲ.
7. ಮೆಷಿನರಿಗಳ ಸರಿಯಾದ ಉಪಯೋಗ ಮಾಡಿಕೊಂಡಿರುವುದಿಲ್ಲ.
8. ಸಿಬ್ಬಂದಿ ವೃಂದಗಳ ಮತ್ತು ವೇತನ ಶ್ರೇಣಿಗೆ ಇಲಾಖೆಯಿಂದ ಅನುಮತಿ ಪಡೆದಿರುವುದಿಲ್ಲ.
9. ಸಂಘವು ಯಾವುದೇ ಕಾರ್ಯ ನಿರ್ವಹಿಸದೇ ನಿಷ್ಕ್ರಿಯಗೊಂಡಿದ್ದು, ದಿನಾಂಕ: 31.3.2003 ಕ್ಕೆ ಇದ್ದಂತೆ ರೂ. 7,05,119/- ಕೂಡಿಬಿದ್ದ ಹಾನಿ ಅನುಭವಿಸುತ್ತಿದೆ.
10. ಫೆಬ್ರವರಿ 2004ನೇ ತಿಂಗಳಲ್ಲಿ ಚುನಾವಣೆ ಜರುಗಿಸಲು ಕ್ರಮ ಕೈಗೊಂಡಿದ್ದರೂ ಅರ್ಹ ಅಭ್ಯರ್ಥಿಗಳು ನಾಮಪತ್ರ ಸಲ್ಲಿಸದೇ ಹೊಸ ಆಡಳಿತ ಮಂಡಳಿ ರಚನೆಯಲ್ಲಿ ವ್ಯತ್ಯಯ ಉಂಟಾಗಿರುತ್ತದೆ.

ಈ ಮೇಲೆ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಮನಗಂಡು ನಿಷ್ಕ್ರಿಯಗೊಂಡಿರುವ ದಿ ಜೆಮ್ ವಾಯರ್ ಉತ್ಪಾದಕರ ಸಹಕಾರ ಸಂಘ ನಿಯಮಿತವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಹೆಚ್. ಗೋಪಾಲಕೃಷ್ಣೇಗೌಡ, ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರೀತ್ಯಾ ದತ್ತವಾಗಿರುವ ಅಧಿಕಾರದನ್ವಯ ದಿ ಜೆಮ್ ವಾಯರ್ ಉತ್ಪಾದಕರ ಸಹಕಾರ ಸಂಘ ನಿ., ಧಾರವಾಡ, ಈ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ ಮತ್ತು ಸಹಕಾರ ಸಂಘಗಳ ಕಾಯ್ದೆ ಕಲಂ 73 ರ ಪ್ರಕಾರ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಧಾರವಾಡ ಉಪವಿಭಾಗ, ಧಾರವಾಡ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ತತ್‌ಕ್ಷಣ ವಹಿಸಿಕೊಂಡು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಮತ್ತು ನಿಯಮ 33 ರಂತೆ ಸಮಾಪನಾಧಿಕಾರಿಯು ಕರ್ತವ್ಯ ನಿರ್ವಹಿಸತಕ್ಕದ್ದು, ಹಾಗೂ ಇತ್ತೀಚಿನ ಲೆಕ್ಕಪರಿಶೋಧನಾ ವರದಿಯ ಆಧಾರದ ಮೇಲೆ ಆದ್ಯತಾ ಪಟ್ಟಿಯನ್ನು ತಯಾರಿಸಿ, ಈ ಕಛೇರಿಯ ಅನುಮೋದನೆ ಪಡೆದು ಆಸ್ತಿ-ಜವಾಬ್ದಾರಿಯನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ಕಛೇರಿಯ ಮೊಹರ್ನಿಶಿಯೊಂದಿಗೆ ಈ ದಿನ ದಿನಾಂಕ: 4.9.2004 ರಂದು ನೀಡಲಾಗಿದೆ.

ಪಿ.ಆರ್. 1282 **ಕೆ.ಹೆಚ್. ಗೋಪಾಲಕೃಷ್ಣೇಗೌಡ**

ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು.

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001**

**ಪ್ರಕಟಣೆ**

**ಸಂಖ್ಯೆ: ಕರಾಆ:ಆಡಳಿತ:27:2004, ದಿನಾಂಕ: 7ನೇ ಸೆಪ್ಟೆಂಬರ್ 2004**

ಗ್ರಾಹಕ ಸಂರಕ್ಷಣಾ ಕಾಯ್ದೆ 1986 ರಡಿಯಲ್ಲಿ ರಚಿತಗೊಂಡು, ಗ್ರಾಹಕರ ವ್ಯಾಜ್ಯಗಳನ್ನು ಇತ್ಯರ್ಥಪಡಿಸುವ ನ್ಯಾಯಿಕ ಸ್ವರೂಪದ ಕೆಲಸವನ್ನು ನಿರ್ವಹಿಸುತ್ತಿದ್ದು, ದಕ್ಷಿಣ ಕನ್ನಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಸ್ಥಾನವು ದಿನಾಂಕ: 5.7.2005ರ ಅಪರಾಹ್ನದಿಂದ ಖಾಲಿಯಾಗುವುದಿದ್ದು, ಸದರಿ ಹುದ್ದೆಗೆ ಈ ಕೆಳಕಂಡ ಅರ್ಹತೆಯುಳ್ಳ ಮತ್ತು ಜಿಲ್ಲಾ ವೇದಿಕೆಯಲ್ಲಿ ನ್ಯಾಯಿಕ ಸ್ವರೂಪದ ಕೆಲಸವನ್ನು ಪ್ರಾಮಾಣಿಕ ಮತ್ತು ನಿಷ್ಠೆಯಿಂದ ನಿರ್ವಹಿಸಲು ಇಚ್ಛೆಯುಳ್ಳ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಈ ಮೂಲಕ ಆಹ್ವಾನಿಸಲಾಗಿದೆ.

ಅರ್ಹತೆ ಮತ್ತು ಇಚ್ಛೆಯುಳ್ಳವರು ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿಯನ್ನು ಭರ್ತಿ ಮಾಡಿ, ಭರ್ತಿ ಮಾಡಿದಂತಹ ಅರ್ಜಿ ಹಾಗೂ ಅದಕ್ಕೆ ಸಂಬಂಧಿಸಿದಂತೆ ಪೂರಕವಾದ ದಾಖಲೆಗಳ ಪ್ರತಿಗಳೊಂದಿಗೆ ದಿನಾಂಕ: 16.10.2004ರ ಸಂಜೆ 5.00 ಗಂಟೆಯೊಳಗಾಗಿ ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಮಹಾನಗರ ಪಾಲಿಕೆ ಕಟ್ಟಡ, ಲಾಲ್‌ಬಾಗ್ ರಸ್ತೆ, ಮಂಗಳೂರು ಇಲ್ಲಿಗೆ ನೇರವಾಗಿ ಅಥವಾ ಅಂಚೆ ಮೂಲಕ ಅರ್ಜಿಯನ್ನು ಸಲ್ಲಿಸಬಹುದು.

**ಜಿಲ್ಲಾ ವೇದಿಕೆಯ ಸದಸ್ಯರಾಗಿ ಆಯ್ಕೆಗೊಳ್ಳಲು ಇರಬೇಕಾದ ಅಂಶಗಳು:-**

1. ಅರ್ಜಿ ಸಲ್ಲಿಸುವ ದಿನಾಂಕದಂದಿಗೆ 35 ವರ್ಷ ವಯಸ್ಸಾಗಿರಬೇಕು ಹಾಗೂ 60 ವರ್ಷ ವಯಸ್ಸಿನೊಳಗಿರಬೇಕು ಹಾಗೂ
2. ಯಾವುದಾದರೂ ಅಂಗೀಕೃತ ವಿಶ್ವವಿದ್ಯಾಲಯದ ಪದವೀಧರರಾಗಿರಬೇಕು ಹಾಗೂ ಪ್ರಾಮಾಣಿಕತೆ, ದಕ್ಷತೆ ಮತ್ತು ನಿಷ್ಠೆ ಇರುವುದರ ಜೊತೆಗೆ ಅರ್ಥಶಾಸ್ತ್ರ : ಕಾನೂನು : ವಾಣಿಜ್ಯ : ಲೆಕ್ಕಪತ್ರ : ಕೈಗಾರಿಕೆ : ಸಾರ್ವಜನಿಕ ವ್ಯವಹಾರಗಳು ಅಥವಾ ಸಾರ್ವಜನಿಕ ಆಡಳಿತ ಇವುಗಳಲ್ಲಿನ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಕನಿಷ್ಠ 10 ವರ್ಷಗಳ ಅನುಭವವನ್ನು ಹೊಂದಿರುವವರಾಗಿರಬೇಕು.

ಜಿಲ್ಲಾ ವೇದಿಕೆಯ ಸದಸ್ಯರಾಗಿ ಆಯ್ಕೆಯಾದವರಿಗೆ ಪ್ರತಿ ತಿಂಗಳು ರೂ. 3000.00 ಗೌರವಧನ ಹಾಗೂ ರೂ. 300.00 ಗಳ ಪ್ರಯಾಣ ಭತ್ಯೆಯನ್ನು ನೀಡಲಾಗುವುದು.

ಅರ್ಜಿ ನಮೂನೆಯ ಪ್ರತಿಗಳನ್ನು ಯಾವುದೇ ಶುಲ್ಕವಿಲ್ಲದಂತೆ ದಕ್ಷಿಣ ಕನ್ನಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗೆ ಖುದ್ದಾಗಿ ಭೇಟಿ ನೀಡಿ ಪಡೆದುಕೊಳ್ಳಬಹುದಾಗಿರುತ್ತದೆ.

ಮಾನ್ಯ ಅಧ್ಯಕ್ಷರ ಆದೇಶಾನುಸಾರ,

ಪಿ.ಆರ್. 1283

**ಶ್ರೀದೇವಿ ಎಸ್. ಅಂಗಡಿ**

ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು,

ರಾಜ್ಯ ಗ್ರಾಹಕರ ಆಯೋಗ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

## ಅಧಿಸೂಚನೆ

### ನಂ: ಎಲ್‌ಆರ್‌ಎಫ್ (ಕಲಂ 109) ಸಿಆರ್ 03:2003-04, ದಿನಾಂಕ: 13ನೇ ಆಗಸ್ಟ್ 2004

ಗೌರಿಬಿದನೂರು ತಾಲ್ಲೂಕು, ತೊಂಡೇಬಾವಿ ಹೋಬಳಿ, ಕೊತ್ತೂರು ಗ್ರಾಮದ ಸ.ನಂ. 92 ರಲ್ಲಿ 10-24 ಎಕರೆ, 93 ರಲ್ಲಿ 4-38 ಎಕರೆ, 94/7 ರಲ್ಲಿ 0-35 ಗುಂಟೆ 113 ರಲ್ಲಿ 2-34 ಎಕರೆ 114 ರಲ್ಲಿ 3-13 ಎಕರೆ 90/13 ರಲ್ಲಿ 2-33 ಎಕರೆ 94/2 ರಲ್ಲಿ 0-06 ಗುಂಟೆ 94/6 ರಲ್ಲಿ 0-15$^{1}/_{2}$ ಗುಂಟೆ 95/2 ರಲ್ಲಿ 0-30 ಗುಂಟೆ 108/2 ರಲ್ಲಿ 1-23 ಎಕರೆ ಮತ್ತು ಸ.ನಂ. 110/2 ರಲ್ಲಿ 3-12$^{1}/_{2}$ ಎಕರೆ ಈ ರೀತಿಯಾಗಿ ಒಟ್ಟು 32-19 ಎಕರೆ ಜಮೀನನ್ನು ದ್ರಾಕ್ಷಿ ಬೆಳೆ ಮತ್ತು ಕೃಷಿ ಆಧಾರಿತ ಕೈಗಾರಿಕೆ ಸ್ಥಾಪನೆಗಾಗಿ (Vine yard and Agro based Industries) ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 ರಡಿಯಲ್ಲಿ ಅನುಮತಿಯನ್ನು ನೀಡಲು ಕೋರಿ ನಿರ್ದೇಶಕರು ಕಾವೇರಿ ವೈನ್ ಯಾರ್ಡ್ಸ್, ಬೆಂಗಳೂರು ರವರು ನಮೂನೆ 15ಎ ರಲ್ಲಿ ಅರ್ಜಿಯನ್ನು ಸಲ್ಲಿಸಿ ತತ್ಸಂಬಂಧ ಹಾಜರುಪಡಿಸಿರುವ ದಾಖಲೆಗಳಿಗೆ ಸಂಬಂಧಿಸಿದಂತೆ ತಹಶೀಲ್ದಾರ್ ಗೌರಿಬಿದನೂರು ತಾಲ್ಲೂಕು ರವರ ಪತ್ರದ ಸಂಖ್ಯೆ: ಭೂ ಸುಧಾರಣೆ ವಿವ 87, 2003-04 ದಿನಾಂಕ: 15.9.2003 ಮತ್ತು 28.2.2004 ರಂತೆ ಕಡತ ತಯಾರಿಸಿ ಸಲ್ಲಿಸಿರುವ ಮಾಹಿತಿಯನ್ನು ಅನುಸರಿಸಿ ಸಹಾಯಕ ಕಮೀಷನರ್ ಚಿಕ್ಕಬಳ್ಳಾಪುರ ಉಪ ವಿಭಾಗರವರು ಪತ್ರ ಸಂ. ಎಲ್‌ಆರ್‌ಎಫ್.ಸಿಆರ್ 29:2003-04 ದಿನಾಂಕ: 23.3.2004 ರಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಅರ್ಜಿದಾರರಿಗೆ ಮೇಲ್ಕಂಡ ಜಮೀನುಗಳನ್ನು ಪ್ರಸ್ತಾಪಿತ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ರ ಕಲಂ 109 ರಂತೆ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಕೊತ್ತೂರು ಗ್ರಾಮದ ಸ.ನಂ. 92 ರ ಪೈಕಿ 10-24 ಎಕರೆ 93 ರಲ್ಲಿ 4-38 ಎಕರೆ, 94/7 ರ ಪೈಕಿ 0-35 ಗುಂಟೆ, 113 ರ ಪೈಕಿ 2-34 ಎಕರೆ ಮತ್ತು 114ರ ಪೈಕಿ 3-13 ಎಕರೆ ಈ ಜಮೀನುಗಳು ಶ್ರೀ ಎಸ್.ಕೆ. ಅನಂತರಾಮನ್ ಬಿನ್ ಕೇಶವರಾವ್ ಎಂಬುವವರ ಹೆಸರಿನಲ್ಲಿಯೂ ಮತ್ತು ಸ.ನಂ. 90/13 ರ ಪೈಕಿ 2-33 ಎಕರೆ 94/2 ರ ಪೈಕಿ 0-06 ಗುಂಟೆ 94/6 ರ ಪೈಕಿ 0-15$^{1}/_{2}$ 94/7 ರ ಪೈಕಿ 0-35 ಗುಂಟೆ 95/2ರ ಪೈಕಿ 0-30 ಗುಂಟೆ 108/2 ರ ಪೈಕಿ 1-23 ಎಕರೆ ಮತ್ತು ಸ.ನಂ. 110/2 ರ ಪೈಕಿ 3-12$^{1}/_{2}$ ಎಕರೆ ಜಮೀನುಗಳ ಖಾತೆಯು ಶ್ರೀಮತಿ ಅಂಬಿಕಾ ಕೋಂ ನಾಗರಾಜ್ ಎಂಬುವವರ ಹೆಸರಿನಲ್ಲಿದ್ದು ಮೇಲ್ಕಂಡ ಎಲ್ಲಾ ಜಮೀನುಗಳು ಖಾತೆದಾರರಿಗೆ ಕ್ರಯದ ಮೂಲಕ ಬಂದಿರುತ್ತೆ. ಮೇಲ್ಕಂಡ ಜಮೀನುಗಳನ್ನು ಖಾತೆದಾರರು ಅರ್ಜಿದಾರರಿಗೆ ಕ್ರಯಕ್ಕೆ ನೀಡಲು ಒಪ್ಪಿ ಕ್ರಯದ ಕರಾರು ಪತ್ರಗಳನ್ನು ಬರೆಸಿಕೊಟ್ಟಿರುತ್ತಾರೆ. ಮೇಲ್ಕಂಡ ಜಮೀನುಗಳು ಹಿಡುವಳಿ ಜಮೀನುಗಳಾಗಿದ್ದು ಈ ಜಮೀನುಗಳು ಕರ್ನಾಟಕ ಭೂ ಸುಧಾರಣೆ ಕಾಯ್ದೆ, ಕರ್ನಾಟಕ ಭೂ ಮಂಜೂರಾತಿ ಕಾಯ್ದೆ / ನಿಯಮಗಳು : ಇನಾಂ ರದ್ದಿಯಾತಿ ಕಾಯ್ದೆ ಮತ್ತು ಪಿ.ಟಿ.ಸಿ.ಎಲ್. ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಮೇಲ್ಕಂಡ ಜಮೀನುಗಳ ಬಗ್ಗೆ ಯಾರೂ ಗೇಣಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಕಾವೇರಿ ವೈನ್ ಯಾರ್ಡ್ಸ್ ಕಂಪೆನಿಯು, ಕಂಪನಿಗಳ ನೋಂದಣಾಧಿಕಾರಿಗಳು, ಬೆಂಗಳೂರು ರವರ ಕಛೇರಿಯಲ್ಲಿ (Registrar of Companies, Karnataka, Bangalore) ನಂ. ಜೆಟಿಎ:ಕೆಎಂ:15994:ಸಿಎನ್:21:2003 ದಿನಾಂಕ: 7.3.2003 ರಂತೆ ನೋಂದಣಿಯಾಗಿರುತ್ತೆ. ಇದರಂತೆ ಕಂಪನಿಯ ಹೆಸರನ್ನು ರೀತೂ ಆಗ್ರೋಟೆಕ್ ಪ್ರೈವೇಟ್ ಲಿಮಿಟೆಡ್ ಎಂಬ ಹೆಸರಿನಿಂದ ಕಾವೇರಿ ವೈನ್ ಯಾರ್ಡ್ ಪ್ರೈವೇಟ್ ಲಿಮಿಟೆಡ್ ಎಂಬುದಾಗಿ ಕಂಪನಿಯ ಹೆಸರನ್ನು ಬದಲಾಯಿಸಿಕೊಂಡಿರುತ್ತೆ. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ ಹಾಗೂ ಸದಸ್ಯ ಕಾರ್ಯದರ್ಶಿಗಳು ರಾಜ್ಯಮಟ್ಟದ ಏಕ ಗವಾಕ್ಷಿ ಏಜೆನ್ಸಿ (State Level Single window Agency) ಬೆಂಗಳೂರು ರವರ ಪತ್ರದ ನಂ. ಕೆಯುಎಂ:ಇ1:ಎಸ್‌ಡಬ್ಲ್ಯೂಎ:228:18:2002-03 ದಿನಾಂಕ: 6.5.2003 ರಂತೆ ಅರ್ಜಿದಾರರಿಗೆ ವೈನ್ ಯಾರ್ಡ್ ಸ್ಥಾಪಿಸಲು ಉದ್ದೇಶಿಸಿರುವ ಯೋಜನೆ ಪ್ರಸ್ತಾವನೆಗಳಿಗೆ ಅನುಮೋದನೆ ನೀಡಿರುತ್ತೆ. ಅರ್ಜಿದಾರರು ಸಲ್ಲಿಸಿರುವ ಯೋಜನಾ ವರದಿಗಳು ಹಾಗೂ ಇತರೆ ದಾಖಲೆಗಳು ಉದ್ದೇಶಿತ ಕಾರ್ಯಕ್ಕೆ ಪೂರಕವಾಗಿರುತ್ತೆ. ಅರ್ಜಿದಾರರಿಗೆ ಮೇಲ್ಕಂಡ ಜಮೀನುಗಳನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡುವ ವಿಚಾರದಲ್ಲಿ ಗ್ರಾಮಸ್ಥರಿಂದ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(v) ರಂತೆ ತೋಟಗಾರಿಕೆ ಮತ್ತು ಕೃಷಿ ಆಧಾರಿತ ಕೈಗಾರಿಕೆಗಳ ಸ್ಥಾಪನೆಗಾಗಿ 20 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (1)(v) ಕ್ಕೆ ತಿದ್ದುಪಡಿಯನ್ನು ತಂದಿರುತ್ತೆ. ಇದರಂತೆ ತೋಟಗಾರಿಕೆ ಮತ್ತು ಕೃಷಿ ಆಧಾರಿತ ಕೈಗಾರಿಕೆಗಳ ಸ್ಥಾಪನೆಗಾಗಿ 10 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಖರೀದಿಸಲು : ದಾನವಾಗಿ ಪಡೆಯಲು ಅನುಮತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಇದರಂತೆ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (1)(v) ಕ್ಕೆ ಅನುಗುಣವಾಗಿರುವುದರಿಂದ ಗೌರಿಬಿದನೂರು ತಾಲ್ಲೂಕು ತೊಂಡೇಬಾವಿ ಹೋಬಳಿ ಕೊತ್ತೂರು ಗ್ರಾಮದ ಸ.ನಂ. 92 ರಲ್ಲಿ 10-24 ಜಮೀನಿನಲ್ಲಿ ಮೀನುಗಾರಿಕೆ ಇಲಾಖೆಯವರು ಕಟ್ಟಡಗಳನ್ನು ಕಟ್ಟಿಕೊಂಡಿರುವ 0-20 ಗುಂಟೆ ಪ್ರದೇಶವನ್ನು ಹೊರತುಪಡಿಸಿ ಉಳಿದ 10-04 ಎಕರೆ, 93 ರಲ್ಲಿ 4-38 ಎಕರೆ, 94/7 ರಲ್ಲಿ 0-35 ಗುಂಟೆ 94/7 ರಲ್ಲಿ 0-35 ಗುಂಟೆ 113 ರಲ್ಲಿ 2-34 ಎಕರೆ 114 ರಲ್ಲಿ 3-13 ಎಕರೆ 90/13 ರಲ್ಲಿ 2-33 ಎಕರೆ 94/2 ರಲ್ಲಿ 0-06 ಗುಂಟೆ 94/6 ರಲ್ಲಿ 0-15$^1/_2$ ಗುಂಟೆ 95/2 ರಲ್ಲಿ 0-30 ಗುಂಟೆ 108/2 ರಲ್ಲಿ 1-23 ಎಕರೆ ಮತ್ತು ಸ.ನಂ. 110/2 ರಲ್ಲಿ 3-12$^1/_2$ ಎಕರೆ ಈ ರೀತಿಯಾಗಿ ಒಟ್ಟು 31-39 (ಮೂವತ್ತೊಂದು ಎಕರೆ ಮೂವತ್ತೊಂಬತ್ತು ಗುಂಟೆ) ಎಕರೆ ಜಮೀನನ್ನು ದ್ರಾಕ್ಷಿ ಬೆಳೆ ಮತ್ತು ಕೃಷಿ ಆಧಾರಿತ ಕೈಗಾರಿಕೆ ಸ್ಥಾಪನೆಗಾಗಿ (Vineyard and Agro based industries) ಕ್ರಯಕ್ಕೆ ಪಡೆಯಲು ನಿರ್ದೇಶಕರು ಕಾವೇರಿ ವೈನ್ ಯಾರ್ಡ್ಸ್ ಪ್ರೈ. ಲಿಮಿಟೆಡ್ ನಂ. 1/23 ರಾಜಾ ಮ್ಯಾನ್‌ಷನ್ಸ್ 12ನೇ ಕ್ರಾಸ್ ಈಜುಕೊಳ ಬಡಾವಣೆ, ಮಲ್ಲೇಶ್ವರಂ, ಬೆಂಗಳೂರು ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 79ಬಿ ಮತ್ತು 80ಕ್ಕೆ ವಿನಾಯ್ತಿಯನ್ನು ನೀಡಿ ಸದರಿ ಕಾಯ್ದೆಯ ಕಲಂ 109(1)(v) ರಂತೆ ಮೇಲ್ಕಂಡ ಜಮೀನುಗಳನ್ನು ಕ್ರಯಕ್ಕೆ ಪಡೆಯಲು ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ : ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ : ಓ.ಡಿ.ಪಿ. ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಸ.ನಂ. 92, 94/7 ಮತ್ತು 95/2 ರ ಜಮೀನುಗಳ ದಕ್ಷಿಣದ ಕಡೆಗೆ ರಸ್ತೆಗಳಿರುವುದರಿಂದ ನಿಯಮಾನುಸಾರ ಅಗತ್ಯವಿರುವ ರಸ್ತೆ ಮಾರ್ಜಿನ್ ಬಿಡತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
7. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ, 1961 ರ ಕಲಂ 109(i) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1286

**ಬಿ.ಎಸ್. ರಾಮಪ್ರಸಾದ್**
ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

## ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18
## ದಾವಾ ಅರ್ಜಿ ಸಂಖ್ಯೆ: ಜೆಆರ್‌ಬಿ:ಡಿಸ್:3062:2004-05, ದಿನಾಂಕ: 29ನೇ ಜುಲೈ 2004

**ವಾದಿ:**
ಮುಖ್ಯ ಕಾರ್ಯನಿರ್ವಹಣಾಧಿಕಾರಿ,
ದಿ. ನ್ಯಾಷನಲ್ ಕೋ-ಆಪರೇಟಿವ್ ಬ್ಯಾಂಕ್ ಲಿ.
ನಂ. 53/1, ಬುಲ್‌ಟೆಂಪಲ್ ರಸ್ತೆ,
ಬೆಂಗಳೂರು-560 019

**ವಿರುದ್ಧ**

**ಪ್ರತಿವಾದಿಗಳು:**
1. ಶ್ರೀ ಬಿ.ಎ. ಚಂದ್ರಮೌಳಿ, ನಂ. 81, ಕುಮಾರಸ್ವಾಮಿ ರಸ್ತೆ (50 ಅಡಿ ರಸ್ತೆ) ಮೌಂಟ್ ಜಾಯ್ ಎಕ್ಸ್‌ಟೆನ್‌ಷನ್, ಹನುಮಂತನಗರ, ಬೆಂಗಳೂರು-19.
2. ಶ್ರೀಮತಿ ಯಶೋಧಮೌಳಿ, ನಂ. 81, ಕುಮಾರಸ್ವಾಮಿ ರಸ್ತೆ (50 ಅಡಿ ರಸ್ತೆ) ಮೌಂಟ್ ಜಾಯ್ ಎಕ್ಸ್‌ಟೆನ್‌ಷನ್, ಹನುಮಂತನಗರ, ಬೆಂಗಳೂರು-19.
3. ಶ್ರೀ ಸಿ.ವೈ. ಸಚಿನ್, ನಂ. 81, ಕುಮಾರಸ್ವಾಮಿ ರಸ್ತೆ (50 ಅಡಿ ರಸ್ತೆ) ಮೌಂಟ್ ಜಾಯ್ ಎಕ್ಸ್‌ಟೆನ್‌ಷನ್, ಹನುಮಂತನಗರ, ಬೆಂಗಳೂರು-19.

## 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಚರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ. 11,85,480.00 ಗಳನ್ನು ದಿನಾಂಕ: 1.7.2004 ರಿಂದ ಶೇಕಡಾ 14 ರಂತೆ ಬಡ್ಡಿ ಮತ್ತು ಶೇಕಡಾ 2 ರಂತೆ ಸುಸ್ತಿ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ: ಜೆಆರ್‌ಬಿ:ಡಿಸ್:3062:2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2. ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಗಳು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು / ಪರಬಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್:ಡಿಕ್ರಿ ನೀಡಿದರೂ ಸದರಿ ಅವಾರ್ಡ್ : ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದೂ ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

3. ವಾದಿಯ ದಾವಾ ಅರ್ಜಿ ಮತ್ತು ಕಲಂ 103 ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103ರ ಅರ್ಜಿಯಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ : ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

4. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 11,85,480.00 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ: 30.8.2004 ರ ಒಳಗಾಗಿ ಅಧಿಕೃತ ಚಲನ್ ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

### ಷೆಡ್ಯೂಲ್ ಆಸ್ತಿಯ ವಿವರ

ಬೆಂಗಳೂರು ನಗರ (ಬೆಂಗಳೂರು-2) ಅವೆನ್ಯೂ ರಸ್ತೆಯಲ್ಲಿರುವ ಆಸ್ತಿ ಸಂಖ್ಯೆ: 277 ಮತ್ತು 278 (ಹಳೇ ಸಂಖ್ಯೆ: 380 ಜೆ 47 / 382 ಮತ್ತು 380.ಜಿ.48/383) ಈ ಸಂಖ್ಯೆಯ ಪೂರ್ವದಿಂದ ಪಶ್ಚಿಮಕ್ಕೆ 30 ಅಡಿ, ಉತ್ತರದಿಂದ ದಕ್ಷಿಣಕ್ಕೆ 18 ಅಡಿ ಅಳತೆಯ ನಿವೇಶನ ಹಾಗೂ ಇದರಲ್ಲಿ ಕಟ್ಟಿರುವ ವ್ಯಾಪಾರ ಮಳಿಗೆ, ವಾಸದ ಮನೆ ಸೇರಿದಂತೆ, ಚೆಕ್ಕುಬಂದಿ:

| | | |
|---|---|---|
| ಪೂರ್ವಕ್ಕೆ | : | ರಾಜಾ ಮಾರ್ಕೆಟಿಗೆ ಹೊಂದಿಕೊಂಡಿರುವ ಲೇನ್ |
| ಪಶ್ಚಿಮಕ್ಕೆ | : | ಅವೆನ್ಯೂ ರಸ್ತೆ |
| ಉತ್ತರಕ್ಕೆ | : | ಆಸ್ತಿ ಸಂಖ್ಯೆ: 276 |
| ದಕ್ಷಿಣಕ್ಕೆ | : | ಆಸ್ತಿ ಸಂಖ್ಯೆ: 279 |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 29.7.2004 ರಂದು ನೀಡಿರುತ್ತೇನೆ.

**ಬಸವೇಗೌಡ**

ಪಿ.ಆರ್. 1287

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ : ಕಾನಪ : ಎಫ್23/2004/391, ದಿನಾಂಕ: 31ನೇ ಆಗಸ್ಟ್ 2004**

**ಅರ್ಜಿದಾರರು:**

1) ಶ್ರೀಮತಿ ಕಳಸವ್ವ ವೈಫ್ಆಫ್ ಹನುಮಪ್ಪಾ ಲಕಮಾಪೂರ,

ವಿಳಾಸ: ಡೋರ ಗಲ್ಲಿ, ತಾ: ಜಿಲ್ಲಾ: ಗದಗ, ರಾಜ್ಯ ಕರ್ನಾಟಕ

2) ಕುಮಾರ ಯಲ್ಲಪ್ಪಾ ತಂದೆ ಹನುಮಪ್ಪಾ ಲಕಮಾಪೂರ

ವಿಳಾಸ: ಡೋರ ಗಲ್ಲಿ, ತಾ: ಜಿಲ್ಲಾ: ಗದಗ, ರಾಜ್ಯ: ಕರ್ನಾಟಕ

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀ ಎಂಗಲೋ ರೊಡ್ರಿ ಗ್ಯೂಸ್ ಪಿ.ಡಬ್ಲ್ಯೂಡಿ ಕಾಂಟ್ರಾ ಕ್ಟರ್,

ವಾಸ: ಚೌಗಲೆ ಕಾಲೇಜ್ ಹತ್ತಿರ, ಮಾಡಗೋವಾ ತಾ: ಸಲಸೆಟ್ ಜಿಲ್ಲೆ, ದಕ್ಷಿಣ ಗೋವಾ, ಗೋವಾ ರಾಜ್ಯ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಕಳಸವ್ವ ವೈಫ್ಆಫ್ ಹನುಮಪ್ಪಾ ಲಕಮಾಪೂರ ವಾಸ: ಗದಗ ಇವರು, ತಾವು ಮೃತ ಕಳಸಪ್ಪ ಲಕಮಾಪುರ ಇವರ ತಾಯಿ ಮತ್ತು ತಮ್ಮ ಎಂದೂ ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕಳಸಪ್ಪ ಲಕಮಾಪೂರ ಇವರು ಒಂದನೇ ಪ್ರತಿವಾದಿಗಳಾದ ಎಂಗಲೋ ರೊಡ್ರಿಗ್ಯೂಸ್, ಪಿ.ಡಬ್ಲ್ಯು.ಡಿ. ಕಂಟ್ರಾ ಕ್ಟರ್ ಇವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ
ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್. 1288

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ : ಕಾನಪ : ಎಫ್22/2004/360, ದಿನಾಂಕ: 11ನೇ ಆಗಸ್ಟ್ 2004**

**ಅರ್ಜಿದಾರರು:**

1) ಶ್ರೀಮತಿ ಪುಷ್ಪಾವತಿ ವೈಫ್ಆಫ್ ಹನಮಂತಪ್ಪ ರಾಟೆ

2) ಕು. ವಿಜಯಕುಮಾರ

3) ಕು. ಅಜಯಕುಮಾರ

4) ಗಂಗಮ್ಮ ತಂದೆ ಹನುಮಂತಪ್ಪ ರಾಟೆ

ವಾಸ: ಮುಂಡರಗಿ ಜಿಲ್ಲೆ: ಗದಗ

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀ ಮೋಹನ ಗಂಗಾಧರ ಶಿಂಧೆ, ಪ್ಲಾಟ್ ನಂ. 12, 2ನೇ ಮೈನ್ ರಸ್ತೆ, ರೇಣುಕಾನಗರ, ಗೋಕುಲ ರಸ್ತೆ, ಹುಬ್ಬಳ್ಳಿ

2) ದಿ ಡಿವಿಜನಲ್ ಮ್ಯಾನೇಜರ್, ನ್ಯಾಷನಲ್ ಇನ್ಸುರೆನ್ಸ್ ಕಂ. ಲಿ., ಸುಜಾತ ಕಾಂಪ್ಲೆಕ್ಸ್, ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಪುಷ್ಪಾವತಿ ವೈಫ್ಆಫ್ ಹನಮಂತಪ್ಪ ರಾಟೆ, ಸಾಕಿನ ಮುಂಡರಗಿ ಇವರು, ತಾವು ಮೃತ ಹನಮಂತಪ್ಪ ರಾಟೆ ಅವರ ಹೆಂಡತಿ ಮತ್ತು 3 (ಮೂರು) ಜನ ಮಕ್ಕಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹನಮಂತಪ್ಪ ರಾಟೆ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಮೋಹನ ಗಂಗಾಧರ ಶಿಂಧೆ ಇವರಲ್ಲಿ ಡ್ರೈವರ್ (ಚಾಲಕ) ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ
ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್. 1289

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-27:2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ವಿ.ಆರ್. ವೆಂಕಟಪತಿ ಬಿನ್ ಲೇಟ್ ವಿ. ಲಿಂಗಪ್ಪ
   42 ವರ್ಷ
2) ವಿ. ರಾಜೇಶ್ ಬಿನ್ ವಿ.ಆರ್. ವೆಂಕಟಪತಿ
   12 ವರ್ಷ
3) ವಿ. ರಾಜಶ್ರೀ ತಂದೆ ವಿ.ಆರ್. ವೆಂಕಟಪತಿ,
   9 ವರ್ಷ,

ವರ್ಲಕೊಂಡ ವಿಲೇಜ್ ಮತ್ತು ಅಂಚೆ, ಸೋಮೇನಹಳ್ಳಿ
ಹೋಬಳಿ, ಗುಡಿಬಂಡೆ ತಾ: ಕೋಲಾರ ಜಿಲ್ಲೆ

ವಿಭಾಗೀಯ ನಿಯಂತ್ರಣಾಧಿಕಾರಿ,
ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ,
ಕೋಲಾರ ವಿಭಾಗ, ಕೋಲಾರ.

**ಅಧಿಸೂಚನೆ**

ಅರ್ಜಿದಾರರಾದ ವಿ.ಆರ್. ವೆಂಕಟಪತಿ ಅವರು ತಮ್ಮ ಪತ್ನಿ ಶ್ರೀಮತಿ ನಿರ್ಮಲ ಅವರು ಪ್ರತಿವಾದಿ ವಿಭಾಗೀಯ ನಿಯಂತ್ರಣಾಧಿಕಾರಿ ರವರ ಬಳಿ ನಿರ್ವಾಹಕ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 17.2.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿದ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 28.8.2004 ರಂದು ನೀಡಲಾಗಿದೆ.

ಪಿ.ಆರ್. 1290

**ಜೆ. ಚಿಕ್ಕಣ್ಣ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ ಜಿಲ್ಲೆ, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-28:2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಶ್ರೀಮತಿ ಸುಗುಣ ಕೋಂ ಎಸ್. ನಾರಾಯಣಪ್ಪ
   45 ವರ್ಷ
2) ಶ್ರೀ ಎಸ್. ನಾರಾಯಣಪ್ಪ ಬಿನ್ ಪಾಪಯ್ಯ
   50 ವರ್ಷ, ಮನೆ ನಂ. 224, ಕುರುಬರಪೇಟೆ,
   2ನೇ ಕ್ರಾಸ್, ಕೋಲಾರ

1) ಸಿ. ಶಂಕರ ನಾಯ್ಡು ಟೆಂಪೋ ಮಾಲೀಕರು,
   ಗುಟ್ಟವಾಳ್ಯಂ ವಿಲೇಜ್, ಕಿರಿಜಾಲ ಅಂಚೆ,
   ರಾಮಸಮುದ್ರಂ ಮಂಡಲಂ,
   ಪುಂಗನೂರ್ ತಾಲ್ಲೂಕ್, ಚಿತ್ತೂರು ಜಿಲ್ಲೆ,
   ಆಂಧ್ರಪ್ರದೇಶ- 517001.
2) ದಿ ನ್ಯಾಷನಲ್ ಇನ್‌ಷ್ಯೂರೆನ್ಸ್ ಕಂ. ಲಿ.,
   ಶ್ರೀರಾಮ್ ಸ್ಟೈಟ್ ಆಫೀಸ್, ನಂ. 2-ಎ,
   ಪ್ರಕಾಶಂ ರಸ್ತೆ, ಟಿ.ನಗರ, ಚೆನ್ನೈ-600 017.
   ತಮಿಳುನಾಡು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಸುಗುಣ ಅವರು ತಮ್ಮ ಮಗನಾದ ಶ್ರೀ ಸುಧಾಕರ್ ನಾಯ್ಡು ಅಲಿಯಾಸ್ ಸುಧಾಕರ್ ಅವರು 1ನೇ ಪ್ರತಿವಾದಿ ಶ್ರೀ ಸಿ. ಶಂಕರ್ ನಾಯ್ಡು ರವರ ಬಳಿ ಚಾಲಕ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 3.5.2004 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿದ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 28.8.2004 ರಂದು ನೀಡಲಾಗಿದೆ.

ಪಿ.ಆರ್. 1291

**ಜೆ. ಚಿಕ್ಕಣ್ಣ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ ಜಿಲ್ಲೆ, ಕೋಲಾರ.

## ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ

**ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:ಎಫ್/265/2004, ದಿನಾಂಕ: 2ನೇ ಸೆಪ್ಟೆಂಬರ್ 2004**

**ಪ್ರಕಟಣೆ**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| 1) ಶ್ರೀ ಅಮರಪ್ಪ ತಂದೆ ಬಸಣ್ಣ ಸಾ: ಕೊಟನಕಲ್ ಹಾಲಿವಸ್ತಿ ಕಾರಟಗಿ ತಾ: ಗಂಗಾವತಿ<br>2) ಶ್ರೀಮತಿ ಬಸಮ್ಮ ಗಂಡ ಅಮರಪ್ಪ ಸಾ: ಕೊಟನಕಲ್, ಹಾಲಿವಸ್ತಿ ಕಾರಟಗಿ ತಾ: ಗಂಗಾವತಿ | | 1) ಶ್ರೀ ಜಹೀದ ತಂದೆ ಗೌಸಸಾಬ R/o H.No. 4-5-22 ಮಂಗಳವಾರ ಪೇಟ ಕೇರಾಫ್ ಹಿಂದುಸ್ತಾನ ಟ್ರಾನ್ಸ್‌ಪೋರ್ಟ್, ಸಾತ ಕಛೇರಿ ರಾಯಚೂರು.<br>2) ದಿ ಓರಿಯಂಟಲ್ ಇನ್ಸುರೆನ್ಸ್ ಕಂ. ಲಿ. ಬಳ್ಳಾರಿ |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ:ಗಾಯ: ಶ್ರೀ ಶಿವರಾಜು ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ಕೆಲಸದಿಂದುಂಟಾದ ಅಪಘಾತದಿಂದ ಮೃತ:ಗಾಯ: ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ:ಗಾಯ ಶಿವರಾಜು ರವರ ವಾರಸುದಾರರಾದ ಶ್ರೀ:ಶ್ರೀಮತಿ ಅಮರಪ್ಪ ಮತ್ತು ಬಸಮ್ಮ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ:ಗಾಯ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಪಿ.ಆರ್. 1292

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

## ಮೈಸೂರು ಅರಮನೆ ಮಂಡಳಿ, ಅರಮನೆ ಆವರಣ, ಮೈಸೂರು

**ಅಧಿಸೂಚನೆ**

**ಕ್ರಮಾಂಕ: ಕಾನಿಅ:ಅಮಂ:ಇಎಸ್‌ಟಿ:1.8.2004-05, ದಿನಾಂಕ: 31ನೇ ಜುಲೈ 2004 / 30ನೇ ಆಗಸ್ಟ್ 2004**

**ವಿಷಯ:** ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಹಾಗೂ 2002ರ ನಿಯಮಗಳು ಅನುಷ್ಠಾನದ ಕುರಿತು.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ:56:ಯೋಇಯನ:02(1), ದಿನಾಂಕ: 18.7.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ನಿಯಮಗಳು 2002 ಜಾರಿಗೆ ಬಂದಿದ್ದು, ಅಧಿನಿಯಮ 2000 ಕಲಂ 2(ಸಿ)(2)ರ ವ್ಯಾಖ್ಯಾನದ ಅಡಿಯಲ್ಲಿ ಕರ್ನಾಟಕ ಸರ್ಕಾರದ ನಿಯಂತ್ರಣಕ್ಕೆ ಒಳಪಟ್ಟ ಶಾಸನಬದ್ಧ ಸಂಸ್ಥೆಗಳು : ಪ್ರಾಧಿಕಾರಗಳಿಗೆ ಈ ಕಾಯ್ದೆ ಮತ್ತು ನಿಯಮಗಳಿಗೆ ಅನ್ವಯಿಸಲಾಗುವುದು ಎಂದು ಹೇಳಲಾಗಿದೆ. ಹಾಗೂ ಸದರಿ ಅಧಿನಿಯಮದ ಕಲಂ 3(ಬಿ) ರನ್ವಯ ಶಾಸನಬದ್ಧ ಸಂಸ್ಥೆಗಳ ರಚನೆ ಮತ್ತು ಕೆಲಸ ನಿರ್ವಹಣೆ ಕುರಿತು ಸಾರ್ವಜನಿಕರಿಗೆ ಮಾಹಿತಿ ಒದಗಿಸಲು ನಿರ್ದೇಶನದಂತೆ ಮೈಸೂರು ಅರಮನೆ ಮಂಡಳಿ ಈ ಅಧಿಸೂಚನೆ ಹೊರಡಿಸಲು ಕ್ರಮ ಜರುಗಿಸಲಾಗಿದೆ.

ಮೈಸೂರು ಅರಮನೆ ಮಂಡಳಿ ರಾಜ್ಯ ಸರ್ಕಾರದ ನಿಯಂತ್ರಣಕ್ಕೆ ಒಳಪಟ್ಟಿದ್ದು, ಮೈಸೂರು ಅರಮನೆ (ಆರ್ಜನೆ ಮತ್ತು ವರ್ಗಾವಣೆ) ಅಧಿನಿಯಮ 1998 ರ ಕಾಯ್ದೆ ರೀತ್ಯ ರಚಿತವಾಗಿದೆ. ರಾಷ್ಟ್ರದ ವಿಶಿಷ್ಟ ಐತಿಹಾಸಿಕ ಹಾಗೂ ವಾಸ್ತುಶಿಲ್ಪ ಪರಂಪರೆ ಪ್ರತೀಕವಾದ ಮೈಸೂರು ಅರಮನೆಯೆಂದು ಪ್ರಖ್ಯಾತವಾಗಿರುವ ಮೈಸೂರಿನಲ್ಲಿರುವ ಅರಮನೆ ಹಾಗೂ ಖಾಲಿ ಜಾಗ, ಉದ್ಯಾನ ಮತ್ತು ತೋಟವು ಸೇರಿದಂತೆ, ಅದರ ವಿಶಿಷ್ಟ ಪರಿಸರ, ರಾಜರ ಸಿಂಹಾಸನಗಳು, ಆಭರಣಗಳು, ಕಲಾಕೃತಿಗಳು, ವರ್ಣಚಿತ್ರಗಳು, ಪೀಠೋಪಕರಣಗಳ ಸಾರ್ವತ್ರಿಕ ಸ್ವರೂಪವನ್ನು ಕಾಪಾಡಿಕೊಂಡು ಬರುವ ಉದ್ದೇಶ ಅರಮನೆ ಮಂಡಳಿ ಹೊಂದಿದೆ. ಅದರಂತೆ ಮೈಸೂರು ಅರಮನೆಯ ಸಂರಕ್ಷಣೆ ಮತ್ತು ಆಡಳಿತ ನಿರ್ವಹಣೆ ಜವಾಬ್ದಾರಿಯನ್ನು ಅರಮನೆ ಮಂಡಳಿಗೆ ವಹಿಸಿಕೊಡಲಾಗಿದೆ. ಕರ್ನಾಟಕ ಸರ್ಕಾರದ ಮಾನ್ಯ ಮುಖ್ಯ ಕಾರ್ಯದರ್ಶಿಗಳು ಮಂಡಳಿಯ ಅಧ್ಯಕ್ಷರಾಗಿದ್ದು, ಕೆಳಕಂಡವರು ಸದಸ್ಯರುಗಳಾಗಿರುತ್ತಾರೆ.

| | | |
|---|---|---|
| 1 | ಮಾನ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3), ವಿಧಾನ ಸೌಧ, ಬೆಂಗಳೂರು | ಸದಸ್ಯರು |

